ಕಲಬುರಗಿ ವಲಯ

| ಕ್ರ.ಸಂ | ವಿಧಾನ ಸಭಾ ಕ್ಷೇತ್ರ | ವೋಲ್ಟೇಜ್ ವರ್ಗ | 2017-18 | | 2018-19 | | 2019-20 | | 2020–21 (ಆಗಸ್ಟ್-20ರ ಅಂತ್ಯದವರೆಗೆ) | |
|---|---|---|---|---|---|---|---|---|---|---|
| | | | ಸಂಖ್ಯೆ | ವೆಚ್ಚ (ರೂ ಕೋಟಿಗಳಲ್ಲಿ) | ಸಂಖ್ಯೆ | ವೆಚ್ಚ (ರೂ ಕೋಟಿಗಳಲ್ಲಿ) | ಸಂಖ್ಯೆ | ವೆಚ್ಚ (ರೂ ಕೋಟಿಗಳಲ್ಲಿ) | ಸಂಖ್ಯೆ | ವೆಚ್ಚ (ರೂ ಕೋಟಿಗಳಲ್ಲಿ) |
| 1 | ಮಾನ್ವಿ | 220ಕೆ.ವಿ. | 1 | 46.56 | – | – | – | – | – | – |
| 2 | ಕನಕಗಿರಿ | 110 ಕೆ.ವಿ | 1 | 12.34 | 2 | 46.58 | 0 | 0 | – | – |
| 3 | ಯಲಬುರ್ಗಾ | 110 ಕೆ.ವಿ | – | – | – | – | 1 | 11.86 | – | – |
| 4 | ರಾಯಚೂರು | 110ಕೆ.ವಿ. | 2 | 27.85 | – | – | – | – | – | – |
| 5 | ಸಿಂಧನೂರು | 110ಕೆ.ವಿ. | 1 | 7.31 | – | – | – | – | – | – |
| 6 | ಅಫಜಲಪೂರ (ಘತ್ತರಗಾ) | 110 ಕೆ.ವಿ | 1 | 6.82 | – | – | – | – | – | – |
| 7 | ಹುಮನಾಬಾದ (ದುಬಲಗುಂಡಿ) | 110 ಕೆ.ವಿ | 1 | 7.04 | – | – | – | – | – | – |
| 8 | ಹಗರಿಬೊಮ್ಮನಹಳ್ಳಿ | 66 ಕೆ.ವಿ | – | – | 1 | 7.56 | – | – | – | – |
| 9 | ಹೂವಿನಹಡಗಲಿ(ತಾ) | 66 ಕೆ.ವಿ | 1 | 6.37 | – | – | – | – | – | – |
| 10 | ಕೊಪ್ಪಳ | 66 ಕೆ.ವಿ | – | – | – | – | – | – | – | – |
| ಒಟ್ಟು | | | 8 | 114.29 | 3 | 54.14 | 1 | 11.86 | 1 | 43.53 |
| ಕ.ವಿ.ಪ್ರ.ನಿ.ನಿ ಒಟ್ಟು | | | 39 | 637.192 | 37 | 731.7379 | 33 | 840.952 | 12 | 719.58 |

ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಶಿವಲಿಂಗೆಗೌಡ ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 1876 ಕ್ಕೆ ಅನುಬಂಧ-2

ರಾಜ್ಯದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ವತಿಯಿಂದ 2020-21 ನೇ ಸಾಲಿನಲ್ಲಿ ನಿರ್ಮಾಣ ಮಾಡಲು ಉದ್ದೇಶಿಸಿರುವ ವಿದ್ಯುತ್ ಉಪಕೇಂದ್ರಗಳು, ಪ್ರಸರಣ ಮಾರ್ಗಗಳು, ಅವುಗಳನ್ನು ನಿರ್ಮಾಣ ಮಾಡಲು ತಗಲುವ ಅಂದಾಜು ವೆಚ್ಚದ ವರ್ಷವಾರು ವಿವರಗಳು

ಅ)ವಿದ್ಯುತ್ ಉಪಕೇಂದ್ರಗಳು (ಸಂಬಂಧಿತ ಪ್ರಸರಣ ಮಾರ್ಗ ಒಳಗೊಂಡಂತೆ)

| ಕ್ರ.ಸಂ | ಜಿಲ್ಲೆ | ವೋಲ್ಟೇಜ್ ವರ್ಗ (ಕೆ.ವಿ ಗಳಲ್ಲಿ) | ವಿದ್ಯುತ್ ಉಪಕೇಂದ್ರಗಳ ಸಂಖ್ಯೆ (ಸಂಬಂಧಿತ ಪ್ರಸರಣ ಮಾರ್ಗ ಒಳಗೊಂಡಂತೆ) | ಅಂದಾಜು ಯೋಜನಾ ವೆಚ್ಚ (ರೂ. ಲಕ್ಷಗಳಲ್ಲಿ) |
|---|---|---|---|---|
| 1 | ಬೆಂಗಳೂರು ಗ್ರಾಮೀಣ | 400 | 1 | 43939.54 |
| | | 66 | 2 | 1972.57 |
| 2 | ಬೆಂಗಳೂರು ನಗರ | 400 | 1 | 44017.63 |
| | | 220 | 1 | 48981.49 |
| | | 66 | 1 | 5038.19 |
| 3 | ಬೆಳಗಾವಿ | 220 | 1 | 7249.00 |
| | | 110 | 2 | 2403.65 |
| 4 | ವಿಜಯಪುರ | 110 | 1 | 1192.60 |
| 5 | | 66 | 1 | 819.66 |
| 6 | ಚಿಕ್ಕಮಗಳೂರು | 110 | 1 | 1104.30 |
| 7 | ಚಿತ್ರದುರ್ಗ | 66 | 1 | 702.75 |
| | | 220 | 1 | 10034.77 |
| 8 | ದಕ್ಷಿಣ ಕನ್ನಡ | 110 | 3 | 4630.35 |
| 9 | ದಾವಣಗೆರೆ | 400 | 1 | 28440.49 |
| | | 220 | 1 | 9763.96 |
| 10 | ಹಾಸನ | 66 | 1 | 416.51 |
| 11 | ಕೋಲಾರ | 220 | 1 | 9579.24 |
| 12 | ಕೊಪ್ಪಳ | 220 | 1 | 2997.91 |
| | | 110 | 2 | 3066.57 |
| 13 | ಮಂಡ್ಯ | 66 | 2 | 1277.39 |
| 14 | ಮೈಸೂರು | 66 | 2 | 1374.77 |
| 15 | ರಾಮನಗರ | 220 | 1 | 8910.88 |
| | | 66 | 4 | 3278.78 |
| 16 | ಶಿವಮೊಗ್ಗ | 110 | 2 | 1711.24 |
| 17 | ಯಾದಗಿರಿ | 220 | 1 | 6284.14 |
| ಒಟ್ಟು | | | **36** | **249188.38** |

..್ಯೇಕ ವಿದ್ಯುತ್ ಪ್ರಸರಣ ಮಾರ್ಗಗಳು

| ಕ್ರಸಂ | ಜಿಲ್ಲೆ | ವೋಲ್ಟೇಜ್ ವರ್ಗ (ಕೆ.ವಿ ಗಳಲ್ಲಿ) | ಪ್ರತ್ಯೇಕ ವಿದ್ಯುತ್ ಪ್ರಸರಣ ಮಾರ್ಗಗಳ ಸಂಖ್ಯೆ | ಅಂದಾಜು ಯೋಜನಾ ವೆಚ್ಚ (ರೂ. ಲಕ್ಷಗಳಲ್ಲಿ) |
|---|---|---|---|---|
| 1 | ಬಾಗಲಕೋಟೆ | 110 | 1 | 619.68 |
| 2 | ಬೆಂಗಳೂರು ಗ್ರಾಮೀಣ | 66 | 2 | 2536.00 |
| 3 | ಬೆಂಗಳೂರು ಗ್ರಾಮೀಣ – ಚಿಕ್ಕಬಳ್ಳಾಪುರ | 66 | 1 | 1177.04 |
| 4 | ಬೆಂಗಳೂರು ನಗರ | 66 | 5 | 16985.44 |
| 5 | ಬೆಂಗಳೂರು ನಗರ–ರಾಮನಗರ | 66 | 1 | 2232.00 |
| 6 | ಬಳ್ಳಾರಿ | 110 | 3 | 195.65 |
| | | 66 | 2 | 1051.99 |
| 7 | ಚಿಕ್ಕಬಳ್ಳಾಪುರ | 66 | 2 | 584.9 |
| 8 | ಚನ್ನರಾಯಪಟ್ಟಣ | 66 | 1 | 154.74 |
| 9 | ಚಾಮರಾಜನಗರ | 66 | 2 | 211.05 |
| 10 | ಚಿಕ್ಕಮಗಳೂರು | 66 | 1 | 1800.00 |
| 11 | ಚಿತ್ರದುರ್ಗ | 220 | 2 | 11967.19 |
| | | 66 | 1 | 646.00 |
| 12 | ದಕ್ಷಿಣ ಕನ್ನಡ | 110 | 5 | 2062.65 |
| 13 | ದಾವಣಗೆರೆ | 66 | 4 | 1463.85 |
| 14 | ಹಾಸನ | 220 | 1 | 1122.11 |
| | | 66 | 1 | 245.84 |
| 15 | ಕಲಬುರಗಿ | 110 | 1 | 128.83 |
| 16 | ಮಂಡ್ಯ | 66 | 3 | 267.04 |
| 17 | ಮೈಸೂರು | 66 | 3 | 280.25 |
| 18 | ಶಿವಮೊಗ್ಗ | 220 | 1 | 289.52 |
| | | 110 | 1 | 566.76 |
| | | 66 | 1 | 864.20 |
| 19 | ತುಮಕೂರು | 66 | 3 | 3966.19 |
| 20 | ಉಡುಪಿ | 110 | 1 | 84.59 |
| 21 | ವಿಜಯಪುರ | 110 | 1 | 583.23 |
| **ಒಟ್ಟು** | | | **50** | **52086.74** |

## ಕರ್ನಾಟಕ ವಿಧಾನಸಭೆ

| | | |
|---|---|---|
| 1). ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1770 |
| 2). ಸದಸ್ಯರ ಹೆಸರು | : | ಶ್ರೀ ಅಬ್ಬಯ್ಯ ಪ್ರಸಾದ್ (ಹುಬ್ಬಳ್ಳಿ-ಧಾರವಾಡ ಪೂರ್ವ) |
| 3). ಉತ್ತರಿಸುವ ದಿನಾಂಕ | : | 29.09.2020 |
| 4). ಉತ್ತರಿಸುವ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಹುಬ್ಬಳ್ಳಿ-ಧಾರವಾಡ ಪೂರ್ವ ಕ್ಷೇತ್ರಕ್ಕೆ 2020-21ನೇ ಸಾಲಿನ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಲ್ಲಿ ಎಷ್ಟು ಅನುದಾನ ಮಂಜೂರು ಮಾಡಲಾಗಿದೆ; | 2020-21ನೇ ಸಾಲಿನಲ್ಲಿ ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಲ್ಲಿ ಹುಬ್ಬಳ್ಳಿ-ಧಾರವಾಡ ಪೂರ್ವ ಕ್ಷೇತ್ರಕ್ಕೆ ರೂ.2.00 ಕೋಟಿಗಳ ಅನುದಾನವನ್ನು ಮಂಜೂರು ಮಾಡಲಾಗಿದೆ. |
| (ಆ) | ಸದರಿ ಮತಕ್ಷೇತ್ರದ ವ್ಯಾಪ್ತಿಯಲ್ಲಿ 2020-21ನೇ ಸಾಲಿನಲ್ಲಿ ಕಾಮಗಾರಿಯ ಯೋಜನೆಯನ್ನು ಪ್ರಾರಂಭಿಸಲು ಪ್ರಸ್ತಾವನೆ ಸಲ್ಲಿಸಿದ್ದರೂ ಅನುಮೋದನೆ ವಿಳಂಬವಾಗಲು ಕಾರಣವೇನು; | ಆರ್ಥಿಕ ಇಲಾಖೆಯ ಸಹಮತಿಯನ್ವಯ ಹುಬ್ಬಳ್ಳಿ-ಧಾರವಾಡ ಪೂರ್ವ ಮತ ಕ್ಷೇತ್ರಕ್ಕೆ 2020-21ನೇ ಸಾಲಿನಲ್ಲಿ ದಿನಾಂಕ:18.09.2020 ರಂದು ಮೊದಲನೆಯ ಕಂತಿನ ಅನುದಾನ ರೂ.50.00 ಲಕ್ಷಗಳನ್ನು ಬಿಡುಗಡೆಯಾಗಿರುವ ಕಾರಣ ಕ್ರಿಯಾ ಯೋಜನೆಯನ್ನು ಅನುಮೋದಿಸಲು ವಿಳಂಬವಾಗಿರುತ್ತದೆ. |
| (ಇ) | ಈ ಯೋಜನೆಯ ಅನುದಾನವನ್ನು ಹೆಚ್ಚಿಸುವ ಕುರಿತು ಸರ್ಕಾರದ ಹಂತದಲ್ಲಿ ಚಿಂತನೆ ಇದೆಯೇ? ವಿವರ ನೀಡುವುದು) | ಇಲ್ಲ. |

ಸಂಖ್ಯೆ: ಪಿಡಿಎಸ್ 67 ಕೆಎಲ್‌ಎಸ್ 2020

(ಬಿ.ಎಸ್.ಯಡಿಯೂರಪ್ಪ),
ಮುಖ್ಯಮಂತ್ರಿ

# ಕರ್ನಾಟಕ ವಿಧಾನಸಭೆ

| | | |
|---|---|---|
| 1). ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1770 |
| 2). ಸದಸ್ಯರ ಹೆಸರು | : | ಶ್ರೀ ಅಬ್ಬಯ್ಯ ಪ್ರಸಾದ್ (ಹುಬ್ಬಳ್ಳಿ-ಧಾರವಾಡ ಪೂರ್ವ) |
| 3). ಉತ್ತರಿಸುವ ದಿನಾಂಕ | : | 29.09.2020 |
| 4). ಉತ್ತರಿಸುವ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಹುಬ್ಬಳ್ಳಿ-ಧಾರವಾಡ ಪೂರ್ವ ಕ್ಷೇತ್ರಕ್ಕೆ 2020-21ನೇ ಸಾಲಿನ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಲ್ಲಿ ಎಷ್ಟು ಅನುದಾನ ಮಂಜೂರು ಮಾಡಲಾಗಿದೆ; | 2020-21ನೇ ಸಾಲಿನಲ್ಲಿ ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಲ್ಲಿ ಹುಬ್ಬಳ್ಳಿ-ಧಾರವಾಡ ಪೂರ್ವ ಕ್ಷೇತ್ರಕ್ಕೆ ರೂ.2.00 ಕೋಟಿಗಳ ಅನುದಾನವನ್ನು ಮಂಜೂರು ಮಾಡಲಾಗಿದೆ. |
| (ಆ) | ಸದರಿ ಮತಕ್ಷೇತ್ರದ ವ್ಯಾಪ್ತಿಯಲ್ಲಿ 2020-21ನೇ ಸಾಲಿನಲ್ಲಿ ಕಾಮಗಾರಿಯ ಯೋಜನೆಯನ್ನು ಪ್ರಾರಂಭಿಸಲು ಪ್ರಸ್ತಾವನೆ ಸಲ್ಲಿಸಿದ್ದರೂ ಅನುಮೋದನೆ ವಿಳಂಬವಾಗಲು ಕಾರಣವೇನು; | ಆರ್ಥಿಕ ಇಲಾಖೆಯ ಸಹಮತಿಯನ್ವಯ ಹುಬ್ಬಳ್ಳಿ-ಧಾರವಾಡ ಪೂರ್ವ ಮತ ಕ್ಷೇತ್ರಕ್ಕೆ 2020-21ನೇ ಸಾಲಿನಲ್ಲಿ ದಿನಾಂಕ:18.09.2020 ರಂದು ಮೊದಲನೆಯ ಕಂತಿನ ಅನುದಾನ ರೂ.50.00 ಲಕ್ಷಗಳನ್ನು ಬಿಡುಗಡೆಯಾಗಿರುವ ಕಾರಣ ಕ್ರಿಯಾ ಯೋಜನೆಯನ್ನು ಅನುಮೋದಿಸಲು ವಿಳಂಬವಾಗಿರುತ್ತದೆ. |
| (ಇ) | ಈ ಯೋಜನೆಯ ಅನುದಾನವನ್ನು ಹೆಚ್ಚಿಸುವ ಕುರಿತು ಸರ್ಕಾರದ ಹಂತದಲ್ಲಿ ಚಿಂತನೆ ಇದೆಯೇ? ವಿವರ ನೀಡುವುದು) | ಇಲ್ಲಾ |

ಸಂಖ್ಯೆ: ಪಿಡಿಎಸ್ 67 ಕೆಎಲ್ಎಸ್ 2020

(ಬಿ.ಎಸ್.ಯಡಿಯೂರಪ್ಪ),
ಮುಖ್ಯಮಂತ್ರಿ

B



ಕರ್ನಾಟಕ ಸರ್ಕಾರ

ಸಂಖ್ಯೆ:ಜಸಂಇ 99 ಡಬ್ಲ್ಯೂಬಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:14/12/2020.

**ಇಂದ:**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಜಲಸಂಪನ್ಮೂಲ ಇಲಾಖೆ,
ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನ ಸೌಧ, ಬೆಂಗಳೂರು.

**ಮಾನ್ಯರೆ,**

**ವಿಷಯ:**- ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಅಮೃತ್ ಅಯ್ಯಪ್ಪ ದೇಸಾಯಿ (ಧಾರವಾಡ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1138ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.

ಉಲ್ಲೇಖ:- ತಮ್ಮ ಪತ್ರ ಸಂಖ್ಯೆ:ಕವಿಸಸ/ಪ್ರಶಾ/249/ಬಾಉಪ್ರಉತ/2020 ದಿನಾಂಕ:14/10/2020.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖಿತ ತಮ್ಮ ಪತ್ರದಲ್ಲಿ ಕೋರಿರುವಂತೆ, ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಅಮೃತ್ ಅಯ್ಯಪ್ಪ ದೇಸಾಯಿ (ಧಾರವಾಡ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1138ಕ್ಕೆ ಸಂಬಂಧಿಸಿದ ಉತ್ತರದ 20 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲಾಗಿದೆ.

ತಮ್ಮ ವಿಶ್ವಾಸಿ,

(ರವೀಂದ್ರ ಕೊಳಡ)
ಸರ್ಕಾರದ ಅಧೀನ ಕಾರ್ಯದರ್ಶಿ(ತಾಂತ್ರಿಕ-5)
ಜಲ ಸಂಪನ್ಮೂಲ ಇಲಾಖೆ

Received
14/12/2020

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1138
ಸದಸ್ಯರ ಹೆಸರು : ಶ್ರೀ ಅಮೃತ್ ಅಯ್ಯಪ್ಪ ದೇಸಾಯಿ (ಧಾರವಾಡ)
ಉತ್ತರಿಸುವ ದಿನಾಂಕ : 29.09.2020
ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರ ಸಂ: | ಪ್ರಶ್ನೆ | ಉತ್ತರ |
|---|---|---|
| ಅ) | ಧಾರವಾಡ ತಾಲೂಕಿನಲ್ಲಿ ತುಪ್ಪರಿಹಳ್ಳ ಹಾಗೂ ಅದರ ಉಪ ಹಳ್ಳಗಳಾದ ಹುಣಸಿಕಟ್ಟಿಹಳ್ಳ ಹಾಗೂ ಚಿಕ್ಕಹಳ್ಳಗಳು ಸುಮಾರು 28 ಕಿಮೀ ಉದ್ದ ಹಾದು ಹೋಗುತ್ತಿದ್ದು, ಸದರಿ ಹಳ್ಳಗಳಿಂದ ಉಂಟಾಗುವ ಪ್ರವಾಹ ತಡೆದು ನೀರು ಸದ್ಬಳಕೆ ಮಾಡುವ ಹಾಗೂ ಏತ ನೀರಾವರಿ ಮೂಲಕ ರೈತರಿಗೆ ನೀರಾವರಿ ಸೌಲಭ್ಯ ಕಲ್ಪಿಸುವ ಯೋಜನೆ ಸರ್ಕಾರದ ಮುಂದಿದೆಯೇ; | ತುಪ್ಪರಿಹಳ್ಳದ ಪ್ರವಾಹ ನಿಯಂತ್ರಣ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಹಾಗೂ ತುಪ್ಪರಿ ಹಳ್ಳದಲ್ಲಿ ಲಭ್ಯವಿರುವ ನೀರನ್ನು ಬಳಸಿ ನೀರಾವರಿ ಸೌಲಭ್ಯ ಕಲ್ಪಿಸಲು ಏತ ನೀರಾವರಿ ಯೋಜನೆಯ ವಿವರವಾದ ಯೋಜನಾ ವರದಿಯು ತಯಾರಿಕಾ ಹಂತದಲ್ಲಿರುತ್ತದೆ. |
| ಆ) | ಹಾಗಿದ್ದಲ್ಲಿ, ಸದರಿ ಯೋಜನೆಯ ಯೋಜನಾ ವರದಿ ಹಾಗೂ ಅಂದಾಜು ಮೊತ್ತದ ಸಂಪೂರ್ಣ ಮಾಹಿತಿ ಒದಗಿಸುವುದು; | ತುಪ್ಪರಿಹಳ್ಳ ಪ್ರವಾಹ ನಿಯಂತ್ರಣ / ಏತ ನೀರಾವರಿ ಹಾಗೂ. ಕೆರೆ ತುಂಬುವ ಯೋಜನೆಯಲ್ಲಿ ಹಳ್ಳದ ಹರಿವಿನ ವ್ಯಾಪ್ತಿಯಲ್ಲಿ ಹೂಳೆತ್ತುವುದು, ಕಾಲುವೆಯ ರೀತಿ ಸೆಕ್ಷನಿಂಗ್ ಮಾಡುವುದು, ತಡೆಗೋಡೆ ನಿರ್ಮಾಣ, ಸಣ್ಣ ಬ್ಯಾರೇಜ್/ ಬ್ರಿಡ್ಜ್‌ಗಳ ನಿರ್ಮಾಣ, ನೀರಾವರಿ ಹಾಗೂ ಕುಡಿಯುವ ನೀರಿಗಾಗಿ ಹಳ್ಳದ ನೀರಿನ ಸದ್ಬಳಕೆಗೆ ಏತ ನೀರಾವರಿ ಯೋಜನೆ ಯನ್ನೊಳಗೊಂಡ ಅಂದಾಜು ರೂ.395.00 ಕೋಟಿಗಳ ಯೋಜನೆಯನ್ನು ರೂಪಿಸಲು feasibility ವರದಿಯನ್ನು ತಯಾರಿಸಲಾಗಿದ್ದು, ಕರ್ನಾಟಕ ನೀರಾವರಿ ನಿಗಮದ ಹಂತದಲ್ಲಿ ಪರಿಶೀಲನೆಯಲ್ಲಿರುತ್ತದೆ.<br>ಮುಂದುವರೆದು, ಸದರಿ ಕಾಮಗಾರಿಯ ವಿವರವಾದ ಯೋಜನಾ ವರದಿ (DPR) ಯನ್ನು ತಯಾರಿಸಲು ಸಮಾಲೋಚಕರನ್ನು ನೇಮಿಸಲಾಗಿದ್ದು, ಸರ್ವೆ ಕಾಮಗಾರಿ ಪ್ರಗತಿಯಲ್ಲಿದ್ದು, ಪ್ರಸ್ತಾವನೆಗೆ ಸಕ್ಷಮ ಪ್ರಾಧಿಕಾರಗಳ ಆಡಳಿತಾತ್ಮಕ ಅನುಮೋದನೆ ನಂತರ ಮುಂದಿನ ಕ್ರಮ ಕೈಗೊಳ್ಳಲಾಗುವುದು. |
| ಇ) | ಈ ಯೋಜನೆಗೆ ಪ್ರಸಕ್ತ ವರ್ಷದಲ್ಲಿ ಮೀಸಲಿಟ್ಟ ಅನುದಾನ ಎಷ್ಟು; | |
| ಈ) | ಸದರಿ ಕಾಮಗಾರಿಯ ಅವಧಿಯು ಮುಕ್ತಾಯಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಉ) | ಈ ಕಾಮಗಾರಿಯನ್ನು ಯಾವ ಕಾಲಮಿತಿಯಲ್ಲಿ ಪೂರ್ಣಗೊಳಿಸಲಾಗುವುದು; | |
| ಊ) | ಸದರಿ ಕಾಮಗಾರಿ ವಿಳಂಬ ಮಾಡಿರುವ ಗುತ್ತಿಗೆದಾರರ ವಿರುದ್ಧ ಸರ್ಕಾರ ಕೈಗೊಂಡ ಕ್ರಮಗಳೇನು? | |

ಸಂಖ್ಯೆ: ಜಸಂಇ 99 ಡಬ್ಲ್ಯೂಬಿಎಂ 2020

(ರಮೇಶ್ ಲ. ಜಾರಕಿಹೊಳಿ)
ಜಲ ಸಂಪನ್ಮೂಲ ಸಚಿವರು

B



**ಕರ್ನಾಟಕ ಸರ್ಕಾರ**

ಸಂಖ್ಯೆ: ಅಪಜೀ 26 ಎಫ್‌ಜಿಎಲ್ 2020 (e)

ಕರ್ನಾಟಕ ಸರ್ಕಾರ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು ದಿನಾಂಕ: 10-12-2020

ಇವರಿಂದ
**ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,**
ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ,
ಬಹುಮಹಡಿಗಳ ಕಟ್ಟಡ, ಬೆಂಗಳೂರು-560001.

ಇವರಿಗೆ,
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

**ವಿಷಯ:** ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಹಾಲಪ್ಪ ಹರತಾಳ್ ಹೆಚ್. (ಸಾಗರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2550ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ: ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಸಚಿವಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.2550/2020 ದಿನಾಂಕ: 06.03.2020.

*****

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಹಾಲಪ್ಪ ಹರತಾಳ್ ಹೆಚ್. (ಸಾಗರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2550ರ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ

(ಎಸ್. ಶ್ರೀನಿವಾಸ) 10/12/2020
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ (ಅರಣ್ಯ-ಸಿ)

10/12/2020

A.S.D - 15-12-2020

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2550
ಸದಸ್ಯರ ಹೆಸರು : ಶ್ರೀ ಹಾಲಪ್ಪ ಹರತಾಳ್ ಹೆಚ್. (ಸಾಗರ)
ಉತ್ತರಿಸುವ ದಿನಾಂಕ : 19.03.2020
ಉತ್ತರಿಸುವ ಸಚಿವರು : ಮಾನ್ಯ ಅರಣ್ಯ, ಜೀವಿ ಪರಿಸ್ಥಿತಿ ಮತ್ತು ಪರಿಸರ ಸಚಿವರು

| ಕ್ರಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಶರಾವತಿ ಮುಳುಗಡೆ ಸಂತ್ರಸ್ಥರ ಸುಮಾರು 22000 ಕುಟುಂಬಗಳಿಗೆ ಭೂಮಿ ಹಕ್ಕಿನ ಸಮಸ್ಯೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಶರಾವತಿ ಸಂತ್ರಸ್ಥರಿಗೆ ಪುನರ್ವಸತಿಗೆ ನೀಡಿದ ಸುಮಾರು 8250 ಎಕರೆ ಭೂಮಿಯು ಡಿನೋಟಿಫಿಕೇಶನ್ ಹಂತದಲ್ಲಿದ್ದು, ಇದುವರೆಗೂ ಪೂರ್ಣಗೊಳಿಸದಿರುವುದು; ಸರ್ಕಾರದ ಗಮನಕ್ಕೆ ಬಂದಿದೆಯೇ; | ಶರಾವತಿ ಸಂತ್ರಸ್ಥರಿಗೆ ಪುನರ್ವಸತಿ ಕಲ್ಪಿಸಲು ಸಂತ್ರಸ್ಥರು ಭೂ ಅನುಭವದಲ್ಲಿರುವ ಪ್ರದೇಶ ಕರ್ನಾಟಕ ಅರಣ್ಯ ಕಾಯ್ದೆ 1963ರ ಕಲಂ–28ರಡಿ ಶಿವಮೊಗ್ಗ ವೃತ್ತದಲ್ಲಿ 6303–12 ಎಕರೆ ಪ್ರದೇಶವು 'ಡಿ' ರಿಸರ್ವ್ ಅಧಿಸೂಚನೆಯಾಗಿರುತ್ತದೆ.<br>(ಕೋಷ್ಟಕ ಕೆಳಗೆ)<br>ಉಳಿದ ಜಮೀನು ಡಿ ನೋಟಿಫೀಕೇಷನ್ ಗೊಳಿಸಲು ಪ್ರಸ್ತಾವನೆ ತಯಾರಿಸುವ ಹಂತದಲ್ಲಿ ಇರುತ್ತದೆ. |
| ಇ) | ಡಿನೋಟಿಫಿಕೇಶನ್ ಮಾಡಿ ಸಂತ್ರಸ್ಥರಿಗೆ ಹಕ್ಕುಪತ್ರ ನೀಡಲು ಇರುವ ತೊಂದರೆಗಳೇನು; (ವಿವರ ಒದಗಿಸುವುದು); | ಮೂಲತಃ ಶರಾವತಿ ಮುಳುಗಡೆ ಸಂತ್ರಸ್ಥರ ದಾಖಲೆಗಳನ್ನು ಕಂದಾಯ ಇಲಾಖೆಯು ಮೂಲ ಪಟ್ಟಿಯೊಂದಿಗೆ ಪರಿಶೀಲಿಸಿ ಸಂತ್ರಸ್ಥರಿಗೆ ಈಗಾಗಲೇ ನೀಡಲಾದ ಸವಲತ್ತು/ ಪರಿಹಾರ/ಭೂ ಮಂಜೂರಾತಿಯನ್ನು ಪರಿಶೀಲಿಸಿ ನಿಖರವಾದ ಮಾಹಿತಿಯನ್ನು ಸಲ್ಲಿಸಿದ ನಂತರ ನಿಯಮಾನುಸಾರ ಕ್ರಮ ಕೈಗೊಳ್ಳಲಾಗುವುದು. ಹಾಗೂ ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಡಿನೋಟಿಫಿಕೇಶನ್ ಮಾಡಲು ಮಧ್ಯಂತರ ಅರ್ಜಿಯನ್ನು (ಐ.ಎ) ಸಲ್ಲಿಸಲಾಗುವುದು. |
| ಈ) | ಶರಾವತಿ ಮುಳುಗಡೆ ಸಂತ್ರಸ್ಥರಿಗೆ ಭೂಮಿಯನ್ನು ನೀಡಿ ಇತರೆ ಎಲ್ಲಾ ಸೌಲಭ್ಯಗಳನ್ನು ನೀಡಲು ಕೈಗೊಂಡ ಕ್ರಮಗಳೇನು? (ಪೂರ್ಣ ವಿವರ ನೀಡುವುದು); | ಶರಾವತಿ ಮುಳುಗಡೆ ಸಂತ್ರಸ್ಥರಿಗೆ ಭೂಮಿಯನ್ನು ನೀಡಿ ಈಗಾಗಲೇ 3125 ಹಕ್ಕು ಪತ್ರಗಳನ್ನು ವಿತ್ತರಿಸಲಾಗಿರುತ್ತದೆ. |

| ಕ್ರಮ ಸಂಖ್ಯೆ | ವಿಭಾಗ | 'ಡಿ' ರಿಸರ್ವ್ ಅಧಿಸೂಚನೆಯಾದ ಅರಣ್ಯದ ವಿಸ್ತೀರ್ಣ(ಎಕರೆ) |
|---|---|---|
| 1 | ಶಿವಮೊಗ್ಗ | 1212.15 |
| 2 | ಸಾಗರ | 3360.17 |
| 3 | ಶಿವಮೊಗ್ಗ ವನ್ಯಜೀವಿ | 1730.20 |
| | ಒಟ್ಟು | **6303.12** |

ಸಂಖ್ಯೆ: ಅಪಜೀ 26 ಎಫ್‌ಜಿಎಲ್ 2020

(ಆನಂದ್ ಸಿಂಗ್)
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು

B



# ಕರ್ನಾಟಕ ಸರ್ಕಾರ

**ಸಂ:** ನಅಇ 209 ಪಿಆರ್‌ಜೆ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ
ಬೆಂಗಳೂರು. ದಿನಾಂಕ:-04-11-2020

**ಇಂದ:**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ.

**ಇವರಿಗೆ:**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:** ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀಮತಿ ಸೌಮ್ಯ ರೆಡ್ಡಿ (ಜಯನಗರ) ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 719 ಕ್ಕೆ ಉತ್ತರಿಸುವ ಕುರಿತು.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀಮತಿ ಸೌಮ್ಯ ರೆಡ್ಡಿ (ಜಯನಗರ) ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 719 ಉತ್ತರದ 10 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

ಲಲಿತಾಬಾಯಿ. ಕೆ
( ಲಲಿತಾಬಾಯಿ. ಕೆ )
ಸರ್ಕಾರದ ಅಧೀನ ಕಾರ್ಯದರ್ಶಿಗಳು (ಪಿ.ಎಂ.ಸಿ),
ನಗರಾಭಿವೃದ್ಧಿ ಇಲಾಖೆ.
04-11-2020

Received
07/12/2020.

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 719
2. ಸದಸ್ಯರ ಹೆಸರು : ಶ್ರೀಮತಿ ಸೌಮ್ಯ ರೆಡ್ಡಿ (ಜಯನಗರ)
3. ಉತ್ತರಿಸಬೇಕಾದ ದಿನಾಂಕ : 29-09-2020
4. ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ಮೆಟ್ರೋ ರೈಲು ಸಂಸ್ಥೆಗೆ ಇತ್ತೀಚಿನ ಲಾಕ್‌ಡೌನ್ ನಿಂದಾಗಿ ನಷ್ಟವೆಷ್ಟು; ಸದರಿ ನಷ್ಟವನ್ನು ಯಾವ ಮೂಲದಿಂದ ಭರಿಸಲಾಗುವುದು; | ಲಾಕ್-ಡೌನ್ ನಿಂದಾಗಿ ಬೆಂಗಳೂರು ಮೆಟ್ರೋ ರೈಲು ನಿಗಮಕ್ಕೆ ಅಂದಾಜು ಲೆಕ್ಕಾಚಾರದ ಪ್ರಕಾರ ಸುಮಾರು ರೂ.116.42 ಕೋಟಿಗಳಷ್ಟು ಕಾರ್ಯಾಚರಣೆಯ ನಷ್ಟ ಉಂಟಾಗಿದೆ. ಬಿ.ಎಂ.ಆರ್.ಸಿ.ಎಲ್. ಸಂಸ್ಥೆಯು Special Purpose Vehicle ಆಗಿ ರಚಿಸಲ್ಪಟ್ಟಿದ್ದು, ಅದರಂತೆ ಕಾರ್ಯಾಚರಣೆಯಲ್ಲಿ ನಷ್ಟ ಇದ್ದಲ್ಲಿ, ಕರ್ನಾಟಕ ಸರ್ಕಾರವು ಅದನ್ನು ಭರಿಸಬೇಕಾಗಿರುತ್ತದೆ. |
| ಆ) | ಮೆಟ್ರೋ ರೈಲು ಸ್ಥಗಿತ ಗೊಂಡಿರುವುದರಿಂದ ವಿದ್ಯುತ್ -ಚ್ಛಕ್ತಿ ಬಳಸದೇ ವಿದ್ಯುತ್‌ನಿಂದ ಉಳಿತಾಯವಾದ ಮೊತ್ತವೆಷ್ಟು; | ಏಪ್ರಿಲ್-2020 ರಿಂದ ಆಗಸ್ಟ್-2020ರ ವರೆಗೆ ಅಂದರೆ 5 ತಿಂಗಳ ಕಾಲಾವಧಿಯಲ್ಲಿ ವಿದ್ಯುತ್-ಚ್ಛಕ್ತಿಗಾಗಿ ಖರ್ಚಾದ ಮೊತ್ತವನ್ನು ಕಳೆದ ವರ್ಷದ ಇದೇ ತಿಂಗಳಲ್ಲಿ ಆದ ವಿದ್ಯುತ್-ಚ್ಛಕ್ತಿ ಖರ್ಚಿಗೆ ಹೋಲಿಸಿದರೆ ಸುಮಾರು ರೂ.20.31 ಕೋಟಿಗಳಷ್ಟು ಕಡಿಮೆಯಾಗಿದೆ. |
| ಇ) | ಈ ನಿಗಮದ ನೌಕರರ ಸಂಖ್ಯೆ ಎಷ್ಟು; ಹಾಗೂ ಇವರ ಪ್ರತಿ ತಿಂಗಳ ವೇತನದ ಮೊತ್ತವೆಷ್ಟು; | ಮೆಟ್ರೋ ನಿಗಮದ ನೌಕರರ ಸಂಖ್ಯೆ ಮತ್ತು ವೇತನಗಳು ಕೆಳಕಂಡಂತಿದೆ: (ರೂ. ಕೋಟಿಗಳಲ್ಲಿ) |

| ಕ್ರ. ಸಂ. | ವಿಭಾಗ | ನೌಕರರ ಸಂಖ್ಯೆ | ನೌಕರರ ವೇತನ (ಪ್ರತಿ ತಿಂಗಳು) |
|---|---|---|---|
| 1 | ಕಾರ್ಯಾಚರಣೆ ಮತ್ತು ನಿರ್ವಹಣೆ ವಿಭಾಗ | 1529 | 9.81 |
| 2 | ಕಾರ್ಯಾಚರಣೆ ಮತ್ತು ನಿರ್ವಹಣೆ ವಿಭಾಗ (ಹೊರಗುತ್ತಿಗೆ) | 1281 | 3.1 |
| 3 | ಯೋಜನೆ ನಿರ್ವಹಣೆ ನೌಕರರು | 856 | 5.94 |
| 4 | ಯೋಜನೆ ನಿರ್ವಹಣೆ ನೌಕರರು (ಹೊರಗುತ್ತಿಗೆ) | 398 | 1 |
| | **ಒಟ್ಟು** | **4064** | **19.85** |

<table>
<tr>
<td>ಈ)</td>
<td>ನಿಗಮದ ಹೊಸ ಯೋಜನೆಗಳು ವಿಳಂಬವಾಗಲು ಕಾರಣಗಳೇನು; ಯಾವ ಕಾಲಮಿತಿಯಲ್ಲಿ ಈ ಯೋಜನೆಗಳನ್ನು ಮುಕ್ತಾಯ ಮಾಡಲಾಗುವುದು;</td>
<td>ಬೆಂಗಳೂರು ಮೆಟ್ರೋ ರೈಲು ಯೋಜನೆಗಳು ಕೋವಿಡ್-19 ರ ಮಹಾಮಾರಿ ಸಾಂಕ್ರಮಿಕ ರೋಗದಿಂದ ಲಾಕ್‌ಡೌನ್ ಆದ ಪ್ರಯುಕ್ತ ಕಟ್ಟಡದ ಕಾರ್ಮಿಕರು ತಮ್ಮ ತಮ್ಮ ಸ್ವಂತ ಊರುಗಳಿಗೆ ತೆರಳಿದ ಕಾರಣ ವಿಳಂಬವಾಗಿರುತ್ತದೆ. ಇತ್ತೀಚಿನ ಲಾಕ್‌ಡೌನ್‌ನಿಂದಾಗಿ ಮುಕ್ತಾಯದ ದಿನಾಂಕಗಳನ್ನು ಪರಿಷ್ಕೃತ ಮಾಡಲಾಗಿದೆ. ಅದರ ವಿವರ ಕೆಳಕಂಡಂತಿರುತ್ತದೆ:
<table>
<tr><th>ರೀಚ್</th><th>ಪೂರ್ಣಗೊಳಿಸುವ ಯೋಜನೆಯ ದಿನಾಂಕ</th></tr>
<tr><td>ರೀಚ್-4ರ ವಿಸ್ತರಣೆ (ದಕ್ಷಿಣ) – ಕನಕಪುರ ರಸ್ತೆ</td><td>ನವೆಂಬರ್-2020</td></tr>
<tr><td>ರೀಚ್-2ರ ವಿಸ್ತರಣೆ (ಪಶ್ಚಿಮ) – ಮೈಸೂರು ರಸ್ತೆ</td><td>ಮಾರ್ಚ್-2021</td></tr>
<tr><td>ರೀಚ್-3ರ ವಿಸ್ತರಣೆ (ಉತ್ತರ) – ತುಮಕೂರು ರಸ್ತೆ</td><td>ಜೂನ್-2022</td></tr>
<tr><td>ರೀಚ್-1ರ ವಿಸ್ತರಣೆ (ಪೂರ್ವ) – ವೈಟ್‌ಫೀಲ್ಡ್ ಮೆಟ್ರೋ</td><td>ಡಿಸೆಂಬರ್-2022</td></tr>
<tr><td>ರೀಚ್-5ರ ಆರ್.ವಿ. ರಸ್ತೆಯಿಂದ ಬೊಮ್ಮಸಂದ್ರ-ಎಲೆಕ್ಟ್ರಾನಿಕ್ ಸಿಟಿ</td><td>ಡಿಸೆಂಬರ್-2022</td></tr>
<tr><td>ರೀಚ್-6ರ ಗೊಟ್ಟಿಗೆರೆಯಿಂದ ನಾಗವಾರದವರೆಗೆ</td><td>ಜೂನ್-2024</td></tr>
</table>
</td>
</tr>
<tr>
<td>ಉ)</td>
<td>ಯೋಜನೆ ವಿಳಂಬದಿಂದ ಆದ ಅಂದಾಜು ಆರ್ಥಿಕ ನಷ್ಟವೆಷ್ಟು? (ವಿವರ ನೀಡುವುದು)</td>
<td>ಯೋಜನೆ ವಿಳಂಬದಿಂದ ಪ್ರತಿ ತಿಂಗಳು ಅಂದಾಜು ರೂ. 41.50 ಕೋಟಿಗಳಷ್ಟು ಆರ್ಥಿಕ ನಷ್ಟವಾಗಲಿದೆ.<br>ವಿವರಗಳು ಕೆಳಕಂಡಂತಿದೆ:
<table>
<tr><th>ಪ್ರತಿ ತಿಂಗಳು ಕಡಿಮೆಯಾದ ಪ್ರಗತಿ (ಸಿವಿಲ್ ಮತ್ತು ಸಿಸ್ಟಮ್)</th><th>ಅವಧಿ (ತಿಂಗಳು)</th><th>ವಾರ್ಷಿಕ ಶೇಕಡ ವಾರು ಎಸ್ಕಲೇಶನ್</th><th>6 ತಿಂಗಳು ಗಳಿಗೆ ಆದ ನಷ್ಟ</th><th>ಪ್ರತಿ ತಿಂಗಳು ಆಗಲಿರುವ ನಷ್ಟ</th></tr>
<tr><td>100</td><td>6</td><td>5</td><td>250</td><td>41.50</td></tr>
</table>
</td>
</tr>
</table>

ಕಡತ ಸಂಖ್ಯೆ: ನಅಇ 210 ಪಿ.ಆರ್.ಜೆ 2020

(signature)

**(ಬಿ.ಎಸ್.ಯಡಿಯೂರಪ್ಪ)**

ಮುಖ್ಯಮಂತ್ರಿಗಳು

B



# ಕರ್ನಾಟಕ ಸರ್ಕಾರ

ಸಂ: ನಅಇ 209 ಪಿಆರ್‌ಜೆ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ
ಬೆಂಗಳೂರು, ದಿನಾಂಕ:-04-11-2020

**ಇಂದ:**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ.

**ಇವರಿಗೆ:**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:** ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ಶ್ರೀನಿವಾಸಮೂರ್ತಿ.ಕೆ (ನೆಲಮಂಗಲ) ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1915 ಕ್ಕೆ ಉತ್ತರಿಸುವ ಕುರಿತು.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ಶ್ರೀನಿವಾಸಮೂರ್ತಿ.ಕೆ (ನೆಲಮಂಗಲ) ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1915 ರ ಉತ್ತರದ 10 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

ಲಲಿತಾಬಾಯಿ.ಕೆ

**( ಲಲಿತಾಬಾಯಿ. ಕೆ )**
ಸರ್ಕಾರದ ಅಧೀನ ಕಾರ್ಯದರ್ಶಿಗಳು (ಪಿ.ಎಂ.ಸಿ),
ನಗರಾಭಿವೃದ್ಧಿ ಇಲಾಖೆ.
04-11-2020

Received
07/12/2020.

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1915
2. ಸದಸ್ಯರ ಹೆಸರು : ಶ್ರೀ ಶ್ರೀನಿವಾಸಮೂರ್ತಿ ಕೆ. (ನೆಲಮಂಗಲ)
3. ಉತ್ತರಿಸಬೇಕಾದ ದಿನಾಂಕ : 29-09-2020
4. ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು-ತುಮಕೂರು ರಸ್ತೆಯಲ್ಲಿರುವ ಮೆಟ್ರೋ ರೈಲು ಮಾರ್ಗವನ್ನು ನೆಲಮಂಗಲ ಪಟ್ಟಣದವರೆಗೂ ವಿಸ್ತರಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಇಲ್ಲ |
| ಆ) | ಮೆಟ್ರೋ ರೈಲು ಸೇವೆಯನ್ನು ನೆಲಮಂಗಲದವರೆಗೂ ಮುಂದುವರೆಸಲು ಸರ್ಕಾರವು ಯಾವ ಕ್ರಮಗಳನ್ನು ಕೈಗೊಂಡಿರುತ್ತದೆ; (ವಿವರ ನೀಡುವುದು) | ಪ್ರಶ್ನೆ ಉದ್ಭವಿಸುವುದಿಲ್ಲ. |
| ಇ) | ಬೆಂಗಳೂರು-ತುಮಕೂರು ರಸ್ತೆಯ ಎಷ್ಟು ಕಿಲೋ ಮೀಟರ್ ರವರೆಗೆ ಈ ರೈಲು ಮಾರ್ಗವನ್ನು ಮುಂದುವರೆಸುವ ಯೋಜನೆ ರೂಪಿಸಲಾಗಿದೆ; ಈ ಯೋಜನೆಗೆ ರಾಜ್ಯ ಸರ್ಕಾರ ಮತ್ತು ಕೇಂದ್ರ ಸರ್ಕಾರ ಎಷ್ಟು ಅನುದಾನ ಮೀಸಲಿಟ್ಟಿದೆ ಹಾಗೂ ಎಷ್ಟು ಅನುದಾನ ಬಿಡುಗಡೆ ಮಾಡಲಾಗಿದೆ; (ವಿವರ ನೀಡುವುದು) | ಪ್ರಶ್ನೆ ಉದ್ಭವಿಸುವುದಿಲ್ಲ. |
| ಈ) | ಈ ಮಾರ್ಗದ ಮೆಟ್ರೋ ರೈಲುಗಳ ನಿಲುಗಡೆ ನಿಲ್ದಾಣಗಳ ಸಂಖ್ಯೆ ಎಷ್ಟು; ಯಾವ ಯಾವ ಪ್ರದೇಶಗಳಲ್ಲಿ ಮೆಟ್ರೋ ನಿಲ್ದಾಣದ ಸ್ಥಳಗಳನ್ನು ಗುರುತಿಸಲಾಗಿದೆ? (ವಿವರ ನೀಡುವುದು) | ಪ್ರಶ್ನೆ ಉದ್ಭವಿಸುವುದಿಲ್ಲ. |

ಕಡತ ಸಂಖ್ಯೆ: ನಅಇ 209 ಪಿ.ಆರ್.ಜೆ 2020

ಬಿ.ಎಸ್. ಯಡಿಯೂರಪ್ಪ
(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿಗಳು

B

ಕರ್ನಾಟಕ ಸರ್ಕಾರ

ಸಂಖ್ಯೆ: ಒಇ 32 ಪಿಎಸ್‌ಡಿ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು, ದಿನಾಂಕ: 05.12.2020

ಇವರಿಂದ,

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, ಬೆಂಗಳೂರು.

ಇವರಿಗೆ,

ಕಾರ್ಯದರ್ಶಿಯವರು,
ಕರ್ನಾಟಕ ವಿಧಾನ ಸಭೆ,
ಬೆಂಗಳೂರು.

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 548ಕ್ಕೆ ಉತ್ತರ ಒದಗಿಸುವ ಬಗ್ಗೆ.

ಉಲ್ಲೇಖ: ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆ ಇವರ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/7ಅ/ಪ್ರಸಂ.548/2020 ದಿನಾಂಕ:21.09.2020.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ.ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 548ಕ್ಕೆ ಉತ್ತರದ 10 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಿದೆ.

ತಮ್ಮ ನಂಬುಗೆಯ,

Shyama Holla 5/12/2020
(ಜಿ. ಶ್ಯಾಮ ಹೊಳ್ಳ)
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು-ಬಿ).
5/12/2020.

ಪ್ರತಿಗಳು:

1. ಮಾನ್ಯ ಗೃಹ ಸಚಿವರ ಆಪ್ತ ಕಾರ್ಯದರ್ಶಿ, ಕರ್ನಾಟಕ ಸರ್ಕಾರ, ವಿಧಾನ ಸೌಧ.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಒಳಾಡಳಿತ ಇಲಾಖೆ ರವರ ಆಪ್ತ ಕಾರ್ಯದರ್ಶಿ.
3. ಸರ್ಕಾರದ ಜಂಟಿ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಕಾನೂನು & ಸುವ್ಯವಸ್ಥೆ) ರವರ ಆಪ್ತ ಸಹಾಯಕರು.
4. ಸರ್ಕಾರದ ಉಪ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಸಮನ್ವಯ) ರವರ ಆಪ್ತ ಸಹಾಯಕರು.
5. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.

B/

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 548
2. ಮಾನ್ಯ ವಿಧಾನ ಸಭಾ ಸದಸ್ಯರ ಹೆಸರು : ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ)
3. ಉತ್ತರಿಸುವ ದಿನಾಂಕ : 29.09.2020
4. ಉತ್ತರಿಸುವ ಸಚಿವರು : ಮಾನ್ಯ ಗೃಹ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಮಾದಕ ವಸ್ತುಗಳ ಜಾಲ (ಡ್ರಗ್ಸ್) ಪತ್ತೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಆ | ಶಾಲಾ-ಕಾಲೇಜು, ಪಬ್‌ಗಳಲ್ಲಿ, ಸಿನಿಮಾ ರಂಗ ಸೇರಿದಂತೆ ವಿವಿಧ ರಂಗಗಳಲ್ಲಿ ಡ್ರಗ್ಸ್/ಮಾದಕ ದ್ರವ್ಯಗಳ ವ್ಯಸನಿಗಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಇ | ಬಂದಿದ್ದಲ್ಲಿ, ತಪ್ಪಿತಸ್ಥರ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗಿದೆ; (ವಿವರ ನೀಡುವುದು) | ಮಾದಕ ವಸ್ತುಗಳ ಬಳಕೆ/ ಸಾಗಣೆ ಮತ್ತು ಮಾರಾಟಗಳಲ್ಲಿ ಭಾಗಿಯಾದ ಆರೋಪಿತರ ವಿರುದ್ಧ ಯಾವುದೇ ತಾರತಮ್ಯವಿಲ್ಲದೆ ಎನ್.ಡಿ.ಪಿ.ಎಸ್ ಕಾಯ್ದೆ 1985 (Narcotic Drugs and Psychotropic Substances act-1985),ರ ನಿಬಂಧನೆಗಳನ್ವಯ ಅಗತ್ಯ ಕ್ರಮಕೈಗೊಳ್ಳಲಾಗುತ್ತಿದೆ.<br>ರಾಜ್ಯದಲ್ಲಿ ಕಳೆದ 05 ವರ್ಷಗಳಲ್ಲಿ ಎನ್.ಡಿ.ಪಿ.ಎಸ್ ಕಾಯ್ದೆ 1985 ರನ್ವಯ ದಾಖಲಾದ ಪ್ರಕರಣಗಳ ಸಂಖ್ಯೆ, ಸದರಿ ಪ್ರಕರಣಗಳಲ್ಲಿ ದೋಷಾರೋಪ ಪಟ್ಟಿ ಸಲ್ಲಿಸಿದ ಹಾಗೂ ಸಂಬಂಧಿಸಿದ ಆರೋಪಿತರಿಗೆ ಶಿಕ್ಷೆಯಾದ ಘಟಕಾವಾರು ಮಾಹಿತಿಯನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ. |
| ಈ | ಈ ಮಾದಕ ವಸ್ತುಗಳ ಜಾಲ ಹಾಗೂ ಡ್ರಗ್ಸ್ ಹಾವಳಿಯಿಂದ ಶಾಲಾ-ಕಾಲೇಜಿನ ವಿದ್ಯಾರ್ಥಿಗಳು ಹಾಗೂ ಯುವ ಜನಾಂಗವನ್ನು ಈ ಅಪಾಯಕಾರಿ ಅಂಶಗಳಿಂದ ದೂರವಿರಲು ಸರ್ಕಾರವು ಕೈಗೊಳ್ಳುವ ಕ್ರಮಗಳೇನು; (ವಿವರ ನೀಡುವುದು) | ಯುವ ಜನತೆ ಹಾಗೂ ಶಾಲಾ ಕಾಲೇಜು ವಿದ್ಯಾರ್ಥಿಗಳನ್ನು ಮಾದಕ ವಸ್ತುಗಳ ಬಳಕೆ ಜಾಲದಿಂದ ದೂರವಿಡಲು ಇಲಾಖೆಯ ವತಿಯಿಂದ ಕೈಗೊಳ್ಳಲಾಗುತ್ತಿರುವ ಕ್ರಮಗಳ ವಿವರವನ್ನು **ಅನುಬಂಧ-2** ರಲ್ಲಿ ನೀಡಲಾಗಿದೆ. |

| | | |
|---|---|---|
| ಉ | ಈ ಮಾದಕ ದ್ರವ್ಯಗಳು/ಡ್ರಗ್ಸ್‌ಗಳು ಸರಬರಾಜಿನ ಮೂಲ ಪತ್ತೆ ಹಚ್ಚಲಾಗಿದೆಯೆ; ಗಡಿ ಜಿಲ್ಲೆಗಳಲ್ಲಿ ಅಕ್ರಮವಾಗಿ ಮಾದಕ ವಸ್ತುಗಳು ಕಳ್ಳ ಸಾಗಾಣೆಯಾಗಿ ಬರದಂತೆ ಸರ್ಕಾರ ಕೈಗೊಳ್ಳುವ ಕ್ರಮಗಳೇನು; ಈ ವರವಿಗೂ ಎಷ್ಟು ಜನರ ವಿರುದ್ಧ ಮೊಕದ್ದಮೆಗಳನ್ನು ದಾಖಲಿಸಲಾಗಿದೆ; (ವಿವರ ನೀಡುವುದು) | ಸಂಘಟಿತ ಅಪರಾಧವಾದ ಮಾದಕ ವಸ್ತುಗಳ ಬಳಕೆ/ಸಾಗಣೆ ಮತ್ತು ಮಾರಾಟ ಕುರಿತು ಕೇಂದ್ರ ಸರ್ಕಾರದ ಸಮನ್ವಯ ಪ್ರಾಧಿಕಾರವಾಗಿದ ಎನ್.ಸಿ.ಬಿಯೊಡನೆ ಸಮನ್ವಯ ಕಾಯ್ದುಕೊಂಡು ಅಗತ್ಯ ಕಾನೂನು ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ. |
| ಊ | ಮಾದಕ ವಸ್ತುಗಳ ಸೇವನೆಯ ವಿರುದ್ಧ ಜನ ಜಾಗೃತಿ ಮೂಡಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಮಾದಕ ವಸ್ತುಗಳ ಸೇವನೆಯ ವಿರುದ್ಧ ಜನ ಜಾಗೃತಿ ಮೂಡಿಸಲು ಕೈಗೊಳ್ಳಲಾದ ಕ್ರಮಗಳ ವಿವರವನ್ನು ಮೇಲೆ ವಿವರಿಸಿದಂತೆ **ಅನುಬಂಧ-2** ರಲ್ಲಿ ನೀಡಲಾಗಿದೆ. |

ಒಇ 32 ಪಿಎಸ್‌ಡಿ 2020

(ಬಸವರಾಜ ಬೊಮ್ಮಾಯಿ)
ಗೃಹ ಸಚಿವರು

ANNEXURE-1

## NDPS Act, CASES FOR THE PERIOD OF 2011 TO 2020 (UPTO 14th September)

| Year | Rep | Fal | Tr | Tru | NI | Con | Dis/ ACQ | Com | PT | UI | Un | OD | AB |
|---|---|---|---|---|---|---|---|---|---|---|---|---|---|
| 2011 | 251 | 1 | 4 | 246 | 0 | 18 | 125 | 1 | 94 | 0 | 1 | 2 | 5 |
| 2012 | 227 | 1 | 3 | 223 | 0 | 24 | 115 | 2 | 78 | 0 | 0 | 0 | 4 |
| 2013 | 294 | 0 | 1 | 293 | 0 | 30 | 108 | 1 | 140 | 0 | 0 | 1 | 13 |
| 2014 | 279 | 1 | 1 | 277 | 0 | 18 | 106 | 0 | 139 | 0 | 2 | 3 | 9 |
| 2015 | 352 | 1 | 0 | 351 | 0 | 39 | 98 | 0 | 197 | 4 | 2 | 4 | 7 |
| 2016 | 652 | 0 | 2 | 650 | 0 | 148 | 95 | 0 | 390 | 6 | 2 | 4 | 5 |
| 2017 | 1126 | 2 | 6 | 1118 | 0 | 188 | 65 | 0 | 803 | 54 | 1 | 3 | 4 |
| 2018 | 1032 | 0 | 3 | 1029 | 0 | 167 | 8 | 1 | 685 | 161 | 4 | 3 | 0 |
| 2019 | 1661 | 0 | 5 | 1656 | 0 | 254 | 1 | 0 | 889 | 509 | 0 | 3 | 0 |
| 2020 | 2589 | 2 | 3 | 2584 | 0 | 83 | 0 | 1 | 844 | 1655 | 0 | 1 | 0 |

| | | | | | |
|---|---|---|---|---|---|
| Rep. | Reported | UI | Under Investigation | NI | Not Investigated |
| Fal | FALSE | UN | Un-Detected | Con | Conviction |
| Tr | Transfer | OD | Other Disposals | ACQ | Disposed /Acquitted |
| Tru | TRUE | AB | Abated | Com | Compromise |
| PT | Pending Trial | | | | |

## ಅನುಬಂಧ-2:

### ಮಾದಕ ವಸ್ತುಗಳ ಮಾರಾಟ ಮತ್ತು ಸಾಗಣೆ ತಡೆಗಟ್ಟುವ ನಿಟ್ಟಿನಲ್ಲಿ ಅನುಸರಿಸಲಾಗುತ್ತಿರುವ ಕ್ರಮಗಳು:

- ಜನ ಸಾಮಾನ್ಯರಲ್ಲಿ ಮಾದಕ ವಸ್ತುಗಳ ವಿರುದ್ಧ ಅರಿವು ಮೂಡಿಸುವ ಸಲುವಾಗಿ ಭಿತ್ತಿ ಪತ್ರಗಳನ್ನು, ಸಿನಿಮಾ ಮಂದಿರಗಳಲ್ಲಿ ಸ್ಲೈಡ್ ಶೋ, ಸುದ್ದಿ ಮಾಧ್ಯಮಗಳಲ್ಲಿ ಮಾದಕ ವಸ್ತುಗಳ ಬಳಕೆ ವಿರುದ್ಧ ಸಂದೇಶಗಳನ್ನು ಪ್ರಕಟಿಸುವುದು, ಹೀಗೆ ಜನಸಾಮಾನ್ಯರಲ್ಲಿ ಅರಿವು ಮೂಡಿಸಲಾಗುತ್ತಿದೆ.
- ವಿಶ್ವ ಸಂಸ್ಥೆಯ ನಿರ್ದೇಶನದನ್ವಯ ಪ್ರತಿ ವರ್ಷ ಆಗಸ್ಟ್ ಮತ್ತು ಸೆಪ್ಟೆಂಬರ್ ಮಾಹೆಯಲ್ಲಿ ಮಾದಕ ವಸ್ತುಗಳ ಮಾರಾಟ ಮತ್ತು ಸಾಗಣೆಯನ್ನು ತಡೆಗಟ್ಟಲು ರಾಜ್ಯಾದ್ಯಂತ ವಿಶೇಷ ಕಾರ್ಯಾಚರಣೆ ಕೈಗೊಳ್ಳಲಾಗುತ್ತಿದೆ. ಈ ಅವಧಿಯಲ್ಲಿ ಶಾಲಾ ಕಾಲೇಜುಗಳಲ್ಲಿ ವಿದ್ಯಾರ್ಥಿಗಳಿಗೆ ಹಾಗೂ ಸಾರ್ವಜನಿಕರಿಗೆ ಮಾದಕ ವಸ್ತುಗಳ ಸೇವನೆಯಿಂದಾಗುವ ದೈಹಿಕ/ ಆರ್ಥಿಕ/ ಸಾಮಾಜಿಕ ದುಷ್ಪರಿಣಾಮಗಳ ಕುರಿತು ವಿಶೇಷ ಜಾಗೃತಿ ಕಾರ್ಯಕ್ರಮಗಳನ್ನು ಆಯೋಜಿಸಲಾಗುತ್ತಿದೆ.
- ಶಾಲಾ ಕಾಲೇಜುಗಳ ಬಳಿ ಗಸ್ತು ವಾಹನಗಳಿಂದ ವಿಶೇಷವಾಗಿ ಗಸ್ತು ನಡೆಸಿ ಶಾಲಾ ಕಾಲೇಜುಗಳಲ್ಲಿ ವಿದ್ಯಾರ್ಥಿಗಳು ಇದಕ್ಕೆ ಬಲಿಯಾಗದಂತೆ ಪೊಲೀಸ್ ಅಧಿಕಾರಿ/ಸಿಬ್ಬಂದಿಗಳು ಆಯಾ ಶಾಖೆಗಳಿಗೆ ಹೋಗಿ ಮಾದಕ ವಸ್ತುಗಳ ದುಷ್ಪರಿಣಾಮದ ಬಗ್ಗೆ ಅರಿವು ಮೂಡಿಸಲಾಗುತ್ತಿದೆ ಹಾಗೂ ಮಾದಕ ವಸ್ತು ಸಾಗಣೆ ಹಾಗೂ ಮಾರಾಟ ಮಾಡುವವರ ವಿರುದ್ಧ ನಿಗಾ ವಹಿಸಲಾಗುತ್ತಿದೆ.
- ಘನ ಸರ್ವೋಚ್ಚ ನ್ಯಾಯಾಲಯದ ಅಪರಾಧಿಕ ಮೇಲ್ಮನವಿ ಸಂಖ್ಯೆ: 652/2012ರಲ್ಲಿ ದಿನಾಂಕ 28/01/2016ರ ಆದೇಶದನ್ವಯ ಡಿ.ಜಿ. & ಐ.ಜಿ.ಪಿ ರವರ ಕಛೇರಿ ಜ್ಞಾಪನ ಸಂಖ್ಯೆ: ಅಪರಾಧ-6/29/ಎಸ್.ಎಂ.ಎಸ್/2016, ದಿನಾಂಕ: 25/04/2016 ರಲ್ಲಿ ಮಾದಕ ವಸ್ತುಗಳ ಜಪ್ತಿ, ಸಂಗ್ರಹಣೆ ಮತ್ತು ವಿಲೇವಾರಿ ಕುರಿತು ಕೈಗೊಳ್ಳಬೇಕಾದ ಕ್ರಮಗಳ ವಿವರಗಳನ್ನು ಎಲ್ಲಾ ಘಟಕಾಧಿಕಾರಿಗಳಿಗೆ ನೀಡಲಾಗಿದೆ.
- ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್.ಡಿ. 01 ಪಿಎನ್‌ಡಿ 2019, ದಿನಾಂಕ: 30/01/2020 ರಲ್ಲಿ ಪೊಲೀಸ್ ಆಯುಕ್ತರು, ಬೆಂಗಳೂರು ನಗರ ಮತ್ತು ವಲಯ ಪೊಲೀಸ್ ಮಹಾ ನಿರೀಕ್ಷಕರುಗಳಿಗೆ ಪಿ.ಐ.ಟಿ. ಎನ್.ಡಿ.ಪಿ.ಎಸ್. ಕಾಯ್ದೆ, 1988ರ ಕಲಂ 3(1)ರಡಿಯಲ್ಲಿ ಮುಂಜಾಗ್ರತ ಕ್ರಮವಾಗಿ ರೂಢಿಗತ ಅಪರಾಧಿಗಳನ್ನು ಬಂಧಿಸಲು ಅಧಿಕಾರ ನೀಡಲಾಗಿದೆ.
- 2015ನೇ ಸಾಲಿನಲ್ಲಿ ಒಬ್ಬ ಅಪರಾಧಿ, 2018 ರಲ್ಲಿ ಮೂವರು ಅಪರಾಧಿಗಳ ಮೇಲೆ ಮಾದಕ ವಸ್ತುಗಳ ಬಳಕೆ ಹಾಗೂ ಸಾಗಾಣಿಕೆ ಪ್ರಕರಣಗಳಲ್ಲಿ ಎನ್.ಡಿ.ಪಿ.ಎಸ್. ಕಾಯ್ದೆಯ ಜೊತೆಗೆ ಗೂಂಡಾ ಕಾಯ್ದೆಯನ್ನು ಚಲಾಯಿಸಿ ಕ್ರಮ ಕೈಗೊಳ್ಳಲಾಗಿದೆ.
- ಸರ್ಕಾರದ ಆದೇಶ ಸಂಖ್ಯೆ: ಒಇ 16 ಪಿಎನ್‌ಡಿ 2018, ದಿನಾಂಕ: 27.08.2018 ರನ್ವಯ ಶಾಲಾ ಕಾಲೇಜು ಮತ್ತು ವಿಶ್ವವಿದ್ಯಾಲಯಗಳ ಹಂತದಲ್ಲಿ ಮಾದಕ ವಸ್ತುಗಳ ಬಳಕೆ ಮತ್ತು ಸಾಗಣೆ ತಡೆಗಟ್ಟಲು ವಿವಿಧ ಇಲಾಖೆಗಳ ಅಧಿಕಾರಿಗಳನ್ನೊಳಗೊಂಡಂತೆ ಸಮಿತಿಯನ್ನು ರಚಿಸಿ ಕರ್ತವ್ಯ ನಿಗಧಿಪಡಿಸಲಾಗಿದೆ.
- 2020ನೇ ಸಾಲಿನಲ್ಲಿ ಮಾದಕ ವಸ್ತುಗಳ ಮಾರಾಟ ಮತ್ತು ಸಾಗಣೆ ಮಾಡುವವರ ವಿರುದ್ಧದ ಪ್ರಕರಣಗಳ ಪೈಕಿ ಒಂದು ಪ್ರಕರಣದಲ್ಲಿ ಆರೋಪಿಗಳ ವಿರುದ್ಧ The Prevention of Illicit Traffic in Narcotic Drugs and Psychotropic Substances Act, 1988 ಕಾಯ್ದೆಯನ್ನು ಸಹ ಅಳವಡಿಸಲಾಗಿದೆ. ಮಾದಕ ವಸ್ತುಗಳ ಉತ್ಪಾದನೆ ಸಾಗಾಣಿಕೆ ಮಾರಾಟ ಮತ್ತು ಸೇವನೆಯನ್ನು ತಡೆಗಟ್ಟುವ ಹಾಗೂ ಎನ್.ಡಿ.ಪಿ.ಎಸ್ ಕಾಯ್ದೆಯನ್ನು ಕಡ್ಡಾಯ ಅನುಷ್ಠಾನಗೊಳಿಸುವ ಸಂಬಂಧವಾಗಿ ಅಗತ್ಯ ಕ್ರಮ ಕೈಗೊಳ್ಳಲು ಎಲ್ಲಾ ಘಟಕಾಧಿಕಾರಿಗಳಿಗೆ ಈ ಕಛೇರಿಯ ಸುತ್ತೋಲೆ ಸಂಖ್ಯೆ: ಅಪರಾಧ-6/25/2020, ದಿನಾಂಕ: 03/09/2020ರಲ್ಲಿ ಸೂಚನೆಗಳನ್ನು ನೀಡಲಾಗಿದೆ.

ಕ
7ತ

B



ಕರ್ನಾಟಕ ಸರ್ಕಾರ

ಸಂಖ್ಯೆ:ಜಸಂಇ 100 ಡಬ್ಲ್ಯೂಬಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:14/12/2020.

**ಇಂದ:**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಜಲಸಂಪನ್ಮೂಲ ಇಲಾಖೆ,
ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನ ಸೌಧ, ಬೆಂಗಳೂರು.

**ಮಾನ್ಯರೆ,**

**ವಿಷಯ:-** ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಅಮೃತ್ ಅಯ್ಯಪ್ಪ ದೇಸಾಯಿ (ಧಾರವಾಡ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1139ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.

ಉಲ್ಲೇಖ:- ತಮ್ಮ ಪತ್ರ ಸಂಖ್ಯೆ:ಕವಿಸಸ/ಪ್ರಶಾ/249/ಬಾಉಪ್ರಉತ/2020 ದಿನಾಂಕ:14/10/2020.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖಿತ ತಮ್ಮ ಪತ್ರದಲ್ಲಿ ಕೋರಿರುವಂತೆ, ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಅಮೃತ್ ಅಯ್ಯಪ್ಪ ದೇಸಾಯಿ (ಧಾರವಾಡ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1139ಕ್ಕೆ ಸಂಬಂಧಿಸಿದ ಉತ್ತರದ 20 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲಾಗಿದೆ.

ತಮ್ಮ ವಿಶ್ವಾಸಿ,

(ರವೀಂದ್ರ ಕೊಂಡ)
ಸರ್ಕಾರದ ಅಧೀನ ಕಾರ್ಯದರ್ಶಿ(ತಾಂತ್ರಿಕ-5)
ಜಲ ಸಂಪನ್ಮೂಲ ಇಲಾಖೆ

Received
14/12/2020

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1139
ಸದಸ್ಯರ ಹೆಸರು : ಶ್ರೀ ಅಮೃತ್ ಅಯ್ಯಪ್ಪ ದೇಸಾಯಿ (ಧಾರವಾಡ)
ಉತ್ತರಿಸುವ ದಿನಾಂಕ : 29.09.2020
ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರ ಸಂ: | ಪ್ರಶ್ನೆ | ಉತ್ತರ |
|---|---|---|
| ಅ) | ಧಾರವಾಡ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಹರಿಯುವ ತುಪ್ಪರಿಹಳ್ಳದ ನಾಲಾ ಸ್ವಚ್ಛತೆ ಹಾಗೂ ಜಾಕ್‌ವೆಲ್ ಮೂಲಕ ನೀರಾವರಿ ಸೌಲಭ್ಯ ಕಲ್ಪಿಸುವ ಕಾಮಗಾರಿಯು ನಿಧಾನವಾಗಿ ಸಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಧಾರವಾಡ ಜಿಲ್ಲೆ ಧಾರವಾಡ ತಾಲ್ಲೂಕಿನ ತಡಕೋಡ, ಬೋಕ್ಯಾಪೂರ, ಗರಗ, ಹಳೇತೇಗೂರ, ಬೋಗೂರ ಮತ್ತು ನೀರಲಕಟ್ಟಿ ಗ್ರಾಮಗಳ ಸಣ್ಣ ನೀರಾವರಿ ಕೆರೆಗಳಿಗೆ ತುಪ್ಪರಿಹಳ್ಳದಿಂದ ನೀರು ತುಂಬಿಸುವ ಯೋಜನೆಗೆ ಸರ್ಕಾರದ ಆದೇಶ ದಿನಾಂಕ:30.03.2017 ರಲ್ಲಿ ರೂ.22.50 ಕೋಟಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿರುತ್ತದೆ.<br><br>ಕಾಮಗಾರಿಯ ಗುತ್ತಿಗೆಯನ್ನು ಟರ್ನ್ ಕೀ ಆಧಾರದ ಮೇಲೆ ರೂ.21.47 ಕೋಟಿಗಳಿಗೆ ದಿನಾಂಕ:28.02.2018 ರಲ್ಲಿ ವಹಿಸಲಾಗಿದ್ದು, ಪ್ರಸ್ತುತ ಕಾಮಗಾರಿಯ ರೈಸಿಂಗ್ ಮೇನ್ ಮತ್ತು ವಿತರಣಾ ಪೈಪ್‌ಲೈನ್ ಕಾಮಗಾರಿಗಳು ಬಹುತೇಕ ಪೂರ್ಣಗೊಂಡಿದ್ದು, ಜಾಕ್‌ವೆಲ್ ಕಂ ಪಂಪ್‌ಹೌಸ್ ನಿರ್ಮಾಣ ಕಾಮಗಾರಿ ಪ್ರಗತಿಯಲ್ಲಿರುತ್ತದೆ.<br><br>ಯೋಜನೆಯ ಬಾಕಿ ಉಳಿದ ಎಲ್ಲಾ ಕಾಮಗಾರಿಗಳನ್ನು ಮಾರ್ಚ್–2021 ರೊಳಗೆ ಪೂರ್ಣಗೊಳಿಸಲು ನಿಯಮನುಸಾರ ಅಗತ್ಯ ಕ್ರಮ ಕೈಗೊಳ್ಳಲಾಗುವುದು. |
| ಆ) | ಬಂದಿದ್ದಲ್ಲಿ, ಸದರಿ ಕಾಮಗಾರಿಯನ್ನು ಅತಿ ಶೀಘ್ರದಲ್ಲಿ ಮುಕ್ತಾಯಗೊಳಿಸಲು ಸರ್ಕಾರ ಕೈಗೊಂಡ ಕ್ರಮವೇನು; | |
| ಇ) | ಸದರಿ ಕಾಮಗಾರಿಯು ಪ್ರಸ್ತುತ ಯಾವ ಹಂತದಲ್ಲಿದೆ; | |
| ಈ) | ಸದರಿ ಕಾಮಗಾರಿಯನ್ನು ಯಾವ ಕಾಲಮಿತಿಯಲ್ಲಿ ಪೂರ್ಣ ಗೊಳಿಸಲಾಗುವುದು | |
| ಉ) | ಸದರಿ ಕಾಮಗಾರಿ ವಿಳಂಬ ಮಾಡಿರುವ ಗುತ್ತಿಗೆದಾರರ ವಿರುದ್ಧ ಸರ್ಕಾರ ಕೈಗೊಂಡ ಕ್ರಮಗಳೇನು? | |

ಸಂಖ್ಯೆ: ಜಸಂಇ 100 ಡಬ್ಲ್ಯೂಬಿಎಂ 2020

**(ರಮೇಶ್ ಲ. ಜಾರಕಿಹೊಳಿ)**
ಜಲ ಸಂಪನ್ಮೂಲ ಸಚಿವರು

B



**ಕರ್ನಾಟಕ ಸರ್ಕಾರ**

ಸಂಖ್ಯೆ:ಜಸಂಇ 105 ಡಬ್ಲ್ಯೂಬಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:14/12/2020.

**ಇಂದ:**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಜಲಸಂಪನ್ಮೂಲ ಇಲಾಖೆ,
ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನ ಸೌಧ, ಬೆಂಗಳೂರು.

**ಮಾನ್ಯರೆ,**

**ವಿಷಯ:**– ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಡಾ:ಅಜಯ್ ಧರ್ಮಸಿಂಗ್ (ಜೇವರ್ಗಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1828ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.

ಉಲ್ಲೇಖ:– ತಮ್ಮ ಪತ್ರ ಸಂಖ್ಯೆ:ಕವಿಸಸ/ಪ್ರಶಾ/249/ಬಾಉಪ್ರಉತ/2020 ದಿನಾಂಕ:14/10/2020.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖಿತ ತಮ್ಮ ಪತ್ರದಲ್ಲಿ ಕೋರಿರುವಂತೆ, ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಡಾ:ಅಜಯ್ ಧರ್ಮಸಿಂಗ್ (ಜೇವರ್ಗಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1828ಕ್ಕೆ ಸಂಬಂಧಿಸಿದ ಉತ್ತರದ 20 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲಾಗಿದೆ.

ತಮ್ಮ ವಿಶ್ವಾಸಿ,

(ರವೀಂದ್ರ ಕೊಂಡ)
ಸರ್ಕಾರದ ಅಧೀನ ಕಾರ್ಯದರ್ಶಿ(ತಾಂತ್ರಿಕ-5)
ಜಲ ಸಂಪನ್ಮೂಲ ಇಲಾಖೆ

Received
14/12/2020

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1828
ಸದಸ್ಯರ ಹೆಸರು : ಡಾ:ಅಜಯ್ ಧರ್ಮಸಿಂಗ್ (ಜೇವರ್ಗಿ)
ಉತ್ತರಿಸುವ ದಿನಾಂಕ : 29.09.2020
ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರ ಸಂ: | ಪ್ರಶ್ನೆ | ಉತ್ತರ |
|---|---|---|
| ಅ) | ಮಲ್ಲಾಬಾದ್ ಏತ ನೀರಾವರಿ ಲಿಫ್ಟ್ ಸಂ.1ರ ಜೇವರ್ಗಿ ಮತ ಕ್ಷೇತ್ರದಲ್ಲಿ ಬರುವ ಒಟ್ಟು ನೀರಾವರಿ ಕ್ಷೇತ್ರವೆಷ್ಟು; ಮತ್ತು ಈ ಯೋಜನೆಗೆ ನಿಗದಿಪಡಿಸಿದ ಒಟ್ಟು ಅನುದಾನವೆಷ್ಟು; | ಕೃ.ಮೇ.ಯೋ. ಹಂತ-3ರಡಿಯ ಮಲ್ಲಾಬಾದ್ ಏತ ನೀರಾವರಿ ಲಿಫ್ಟ್ ಸಂ.1 ರಲ್ಲಿ ಜೇವರ್ಗಿ ಮತಕ್ಷೇತ್ರದ ಒಟ್ಟು 8,068 ಹೆಕ್ಟೇರ್ ನೀರಾವರಿ ಅಚ್ಚುಕಟ್ಟು ಕ್ಷೇತ್ರ ಒಳಪಟ್ಟಿರುತ್ತದೆ. ಸದರಿ ಯೋಜನೆಗೆ ರೂ.11.75 ಕೋಟಿ ಅನುದಾನ ಬಿಡುಗಡೆಯಾಗಿ ಖರ್ಚು ಮಾಡಲಾಗಿರುತ್ತದೆ. |
| ಆ) | ಮಲ್ಲಾಬಾದ್ ಏತ ನೀರಾವರಿ ಲಿಫ್ಟ್ ಸಂ.1 ರಲ್ಲಿ ಇಲ್ಲಿಯವರೆಗೆ ನೀರಾವರಿ ಸೌಲಭ್ಯ ವಹಿಸಲು ಕೆಲಸ ನಿರ್ವಹಿಸಿದ ಕ್ಷೇತ್ರವೆಷ್ಟು; ಇಲ್ಲಿಯವರೆಗೆ ಖರ್ಚು ಮಾಡಿದ ಅನುದಾನ ಎಷ್ಟು; | ಮಲ್ಲಾಬಾದ್ ಏತ ನೀರಾವರಿ ಲಿಫ್ಟ್ ಸಂ.1 ರಲ್ಲಿ ಇದುವರೆಗೂ 3,027 ಹೆಕ್ಟೇರ್ ಕ್ಷೇತ್ರದ ಔಟ್‌ಲೆಟ್ ನೀರಾವರಿ ಸಾಮರ್ಥ್ಯ ಕಲ್ಪಿಸಲಾಗಿದ್ದು, ಪ್ರಾಯೋಗಿಕವಾಗಿ ನೀರು ಹರಿಸಲಾಗಿದೆ. |
| ಇ) | ಈ ನೀರಾವರಿಗೊಳಪಡುವ ಬಾಕಿ ಉಳಿದ ಕಾಮಗಾರಿ ಕ್ಷೇತ್ರವೆಷ್ಟು; ಇದು ಯಾವಾಗ ಪೂರ್ಣಗೊಳ್ಳುತ್ತದೆ; ಸದರಿ ಕಾಮಗಾರಿಗಳನ್ನು ಪೂರ್ಣಗೊಳ್ಳಲು ನಿಗದಿಪಡಿಸಿದ ಕಾಲಾವಧಿ ಎಷ್ಟು; ಬಾಕಿ ಉಳಿದ ಕಾಮಗಾರಿಗಳನ್ನು ಯಾವಾದ ಪೂರ್ಣ ಗೊಳಿಸಲಾಗುತ್ತದೆ? | ಈ ಯೋಜನೆಯಡಿಯ ಮುಖ್ಯ ಸ್ಥಾವರ ಮತ್ತು ಮುಖ್ಯ ಕಾಲುವೆಗಳನ್ನು ಕೈಗೆತ್ತಿಕೊಂಡು ಪೂರ್ಣಗೊಳಿಸಲಾಗಿದ್ದು, ಬಾಕಿ ಇರುವ ವಿತರಣಾ ಕಾಲುವೆ ಜಾಲದ ಕಾಮಗಾರಿಗಳನ್ನು ಕೃಷ್ಣಾ ನ್ಯಾಯಾಧಿಕರಣ-2ರ ತೀರ್ಪಿನ ಅಧಿಸೂಚನೆಯನ್ನು ಆಧರಿಸಿ ಅಗತ್ಯ ಅನುದಾನ ಕಲ್ಪಿಸುವುದರೊಂದಿಗೆ ಆದ್ಯತೆ ಮೇರೆಗೆ ಕಾಮಗಾರಿಗಳನ್ನು ಕೈಗೆತ್ತಿಕೊಂಡು ಪೂರ್ಣಗೊಳಿಸಲು ಯೋಜಿಸಲಾಗಿದೆ. |

ಸಂಖ್ಯೆ: ಜಸಂಇ 105 ಡಬ್ಲ್ಯೂಬಿಎಮ್ 2020

(ರಮೇಶ್ ಲ. ಜಾರಕಿಹೊಳಿ)
ಜಲ ಸಂಪನ್ಮೂಲ ಸಚಿವರು

B



ಕರ್ನಾಟಕ ಸರ್ಕಾರ

ಸಂಖ್ಯೆ:ಜಸಂಇ 98 ಡಬ್ಲ್ಯೂಬಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:14/12/2020.

**ಇಂದ:**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಜಲಸಂಪನ್ಮೂಲ ಇಲಾಖೆ,
ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನ ಸೌಧ, ಬೆಂಗಳೂರು.

**ಮಾನ್ಯರೆ,**

**ವಿಷಯ:-** ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ (ಬೈಲಹೊಂಗಲ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1923ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.

ಉಲ್ಲೇಖ:- ತಮ್ಮ ಪತ್ರ ಸಂಖ್ಯೆ:ಕವಿಸಸ/ಪ್ರಶಾ/249/ಬಾಉಪ್ರಉತ/2020 ದಿನಾಂಕ:14/10/2020.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖಿತ ತಮ್ಮ ಪತ್ರದಲ್ಲಿ ಕೋರಿರುವಂತೆ, ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ (ಬೈಲಹೊಂಗಲ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1923ಕ್ಕೆ ಸಂಬಂಧಿಸಿದ ಉತ್ತರದ 20 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲಾಗಿದೆ.

ತಮ್ಮ ವಿಶ್ವಾಸಿ,

(ರವೀಂದ್ರ ಕೊಂಡ)
ಸರ್ಕಾರದ ಅಧೀನ ಕಾರ್ಯದರ್ಶಿ(ತಾಂತ್ರಿಕ-5)
ಜಲ ಸಂಪನ್ಮೂಲ ಇಲಾಖೆ

Received
14/12/2020

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 1923 |
| ಸದಸ್ಯರ ಹೆಸರು | : ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ) |
| ಉತ್ತರಿಸುವ ದಿನಾಂಕ | : 29.09.2020 |
| ಉತ್ತರಿಸುವ ಸಚಿವರು | : ಜಲಸಂಪನ್ಮೂಲ ಸಚಿವರು |

| ಕ್ರ ಸಂ: | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆ ಬೈಲಹೊಂಗಲ ವಿಧಾನ ಸಭಾ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಮಲಪ್ರಭಾ ಯೋಜನೆ ಪುನರ್ವಸತಿ ಕೇಂದ್ರದ ಏಣಗಿ ಗ್ರಾಮದಿಂದ ಹಳೆ ಏಣಗಿ, ಯಕ್ಕುಂಡಿ ಗ್ರಾಮದಿಂದ ಹಳೆ ಯಕ್ಕುಂಡಿ, ಬಡ್ಲಿ ಗ್ರಾಮದಿಂದ ನದಿಗೆ ಹೋಗುವ ರಸ್ತೆ, ಮರಕುಂವಿ-ಇಂಚಲ ರಸ್ತೆಯು ಸಂಪೂರ್ಣ ಹಾಳಾಗಿದ್ದು, ಈ ರಸ್ತೆಗಳ ಅಭಿವೃದ್ಧಿಗಾಗಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೆಳಗಾವಿ ಜಿಲ್ಲೆ ಬೈಲಹೊಂಗಲ ವಿಧಾನ ಸಭಾ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಈ ಕೆಳಕಂಡ ರಸ್ತೆಗಳು ಹಾಳಾಗಿರುವುದು ಗಮನಕ್ಕೆ ಬಂದಿದ್ದು, ಕೈಗೊಂಡ ಕ್ರಮ ಈ ಕೆಳಗಿನಂತಿದೆ.<br>(1) ಮರಕುಂವಿ-ಇಂಚಲ ರಸ್ತೆ ಅಭಿವೃದ್ಧಿ ಕಾಮಗಾರಿಗಾಗಿ ರೂ.350.00 ಲಕ್ಷಗಳಿಗೆ ಅಂದಾಜು ಪತ್ರಿಕೆಯನ್ನು ತಯಾರಿಸಲಾಗಿದೆ.<br>(2) ಮಲಪ್ರಭಾ ಯೋಜನೆ ಪುನರ್ವಸತಿ ಕೇಂದ್ರದ ಏಣಗಿ ಗ್ರಾಮದಿಂದ ಹಳೆ ಏಣಗಿವರೆಗಿನ ರಸ್ತೆ ಸುಧಾರಣೆ ಕಾಮಗಾರಿಗಾಗಿ ರೂ.139.50 ಲಕ್ಷ ಮೊತ್ತದ ಅಂದಾಜು ಪತ್ರಿಕೆಯನ್ನು ತಯಾರಿಸಲಾಗಿದ್ದು, ಪರಿಶೀಲನಾ ಹಂತದಲ್ಲಿರುತ್ತದೆ.<br>(3) ಯಕ್ಕುಂಡಿ ಗ್ರಾಮದಿಂದ ಹಳೆ ಯಕ್ಕುಂಡಿ, ಬಡ್ಲಿ ಗ್ರಾಮದಿಂದ ನದಿಗೆ ಹೋಗುವ ರಸ್ತೆಗಳ ಅಭಿವೃದ್ಧಿಗಾಗಿ ಸುಮಾರು ರೂ.125.00 ಲಕ್ಷ ಮೊತ್ತದ ಅಂದಾಜು ಪತ್ರಿಕೆಯು ತಯಾರಿಕಾ ಹಂತದಲ್ಲಿರುತ್ತದೆ. |
| ಆ) | ಈ ರಸ್ತೆಗಳು ಸಂಪೂರ್ಣವಾಗಿ ಹಾಳಾಗಿರುವುದರಿಂದ ರೈತರಿಗೆ ಹಾಗೂ ಸಾರ್ವಜನಿಕರಿಗೆ ಸಂಚರಿಸಲು ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಇ) | ಈ ಭಾಗದ ರೈತರು ಮಲಪ್ರಭಾ ಯೋಜನೆಯಡಿಯಲ್ಲಿ ತಮ್ಮ ಜಮೀನು ಹಾಗೂ ಮನೆಗಳನ್ನು ಕಳೆದುಕೊಂಡ ಸಂಗತಿ ಸರ್ಕಾರದ ಗಮನಕ್ಕೆ ಬಂದಿದೆಯೇ; | ಗಮನಕ್ಕೆ ಬಂದಿದೆ |
| ಈ | ಹಾಗಿದ್ದಲ್ಲಿ ಮಲಪ್ರಭಾ ಯೋಜನೆಯಡಿಯಲ್ಲಿ ಜಮೀನು ಕಳೆದುಕೊಂಡ ನಿರಾಶ್ರಿತರಾದ ಜನರ ಅನುಕೂಲತೆಗಾಗಿ ಸದರಿ ರಸ್ತೆಗಳನ್ನು ಅಭಿವೃದ್ಧಿ ಪಡಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ? | ಮೇಲಿನ (ಅ) ಮತ್ತು (ಆ) ನಲ್ಲಿ ವಿವರಿಸಿರುವಂತೆ, ಸದರಿ ರಸ್ತೆಗಳನ್ನು ಅಭಿವೃದ್ಧಿಪಡಿಸುವ ಪ್ರಸ್ತಾವನೆಗಳು ಕರ್ನಾಟಕ ನೀರಾವರಿ ನಿಗಮದಡಿ ಪರಿಶೀಲನೆಯ ವಿವಿಧ ಹಂತದಲ್ಲಿದ್ದು, ಸಕ್ಷಮ ಪ್ರಾಧಿಕಾರಗಳ ಅನುಮೋದನೆ ನಂತರ ಮುಂದಿನ ಕ್ರಮ ಕೈಗೊಳ್ಳಲಾಗುವುದು. |

ಸಂಖ್ಯೆ: ಜಸಂಇ 98 ಡಬ್ಲ್ಯೂಬಿಎಂ 2020

**(ರಮೇಶ್ ಲ. ಜಾರಕಿಹೊಳಿ)**
ಜಲ ಸಂಪನ್ಮೂಲ ಸಚಿವರು

ಕಿ
1/8
B



ಕರ್ನಾಟಕ ಸರ್ಕಾರ

ಸಂಖ್ಯೆ:ಜಸಂಇ 103 ಡಬ್ಲ್ಯೂಬಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:14/12/2020.

**ಇಂದ:**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಜಲಸಂಪನ್ಮೂಲ ಇಲಾಖೆ,
ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನ ಸೌಧ, ಬೆಂಗಳೂರು.

**ಮಾನ್ಯರೆ,**

**ವಿಷಯ:-** ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:636ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.

ಉಲ್ಲೇಖ:- ತಮ್ಮ ಪತ್ರ ಸಂಖ್ಯೆ:ಕವಿಸಸ/ಪ್ರಶಾ/249/ಬಾಉಪ್ರಉತ/2020 ದಿನಾಂಕ:14/10/2020.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖಿತ ತಮ್ಮ ಪತ್ರದಲ್ಲಿ ಕೋರಿರುವಂತೆ, ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:636ಕ್ಕೆ ಸಂಬಂಧಿಸಿದ ಉತ್ತರದ 20 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲಾಗಿದೆ.

ತಮ್ಮ ವಿಶ್ವಾಸಿ,

(ರವೀಂದ್ರ ಕೊಂಡ)
ಸರ್ಕಾರದ ಅಧೀನ ಕಾರ್ಯದರ್ಶಿ(ತಾಂತ್ರಿಕ-5)
ಜಲ ಸಂಪನ್ಮೂಲ ಇಲಾಖೆ

Received
14/12/2020

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 636 |
| ಸದಸ್ಯರ ಹೆಸರು | : ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ) |
| ಉತ್ತರಿಸುವ ದಿನಾಂಕ | : 29.09.2020 |
| ಉತ್ತರಿಸುವ ಸಚಿವರು | : ಜಲಸಂಪನ್ಮೂಲ ಸಚಿವರು |

| ಕ್ರ ಸಂ: | ಪ್ರಶ್ನೆ | ಉತ್ತರ |
|---|---|---|
| ಅ) | ಇಂಡಿ ತಾಲ್ಲೂಕಿನ ನೀರಾವರಿ ವಂಚಿತ ಪ್ರದೇಶಗಳಿಗೆ ತಿಡಗುಂಡಿ ವಿಸ್ತರಣಾ ಕಾಲುವೆ ಮೂಲಕ ಏತ ನೀರಾವರಿ ಸೌಲಭ್ಯವನ್ನು ಒದಗಿಸುವ ಪ್ರಸ್ತಾವನೆಯು ಕೃಷ್ಣಾ ಭಾಗ್ಯ ಜಲ ನಿಗಮಕಜ್ಜೆ ಸಲ್ಲಿಕೆಯಾಗಿರುವುದು ನಿಜವೇ; | ಕೃ.ಮೇ.ಯೋ ಹಂತ-3ರಡಿಯ ತಿಡಗುಂದಿ ಶಾಖಾ ಕಾಲುವೆ ಕಿ.ಮಿ.56ರವರೆಗೆ ಬರುವ ಒಟ್ಟು ಅಚ್ಚುಕಟ್ಟು ಕ್ಷೇತ್ರ 25,572ಹೆ. ಪೈಕಿ ಇಂಡಿ ತಾಲ್ಲೂಕಿನ 7,898 ಹೆ. ಕ್ಷೇತ್ರ ನೀರಾವರಿಗೆ ಒಳಪಡಲಿದೆ. ಮುಂದುವರೆದು, ತಿಡುಗುಂದಿ ಶಾಖಾ ಕಾಲುವೆ ಕಿ.ಮಿ.56 ರಿಂದ 65ರವರೆಗೆ ಪೈಪ್‌ಲೈನ್ ಜಾಲದ ಮುಖಾಂತರ ಇಂಡಿ ತಾಲ್ಲೂಕಿನಡಿ ಸುಮಾರು 14,500 ಹೆ. ಅಚ್ಚುಕಟ್ಟು ಕ್ಷೇತ್ರಕ್ಕೆ ನೀರಾವರಿ ಸೌಲಭ್ಯ ಕಲ್ಪಿಸಲು ಯೋಜಿಸಲಾಗಿದ್ದು, ಕಾಮಗಾರಿಗೆ ಟೆಂಡರ್ ಆಹ್ವಾನಿಸಲಾಗಿದೆ.<br><br>ತಿಡಗುಂದಿ ಶಾಖಾ ಕಾಲುವೆಯ ವಿಸ್ತರಣೆಯಿಂದ ಇಂಡಿ ತಾಲ್ಲೂಕಿನ ನೀರಾವರಿ ವಂಚಿತ ಪ್ರದೇಶಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸಲು ತಾಂತ್ರಿಕವಾಗಿ ಸಾಧ್ಯವಾಗದೆ ಇರುವುದರಿಂದ ಪರ್ಯಾಯವಾಗಿ ಆಲಮಟ್ಟಿ ಜಲಾಶಯದ ಹಿನ್ನೀರಿನಿಂದ ನೀರನ್ನು ಲಿಫ್ಟ್ ಮಾಡಿ ಇಂಡಿ ತಾಲ್ಲೂಕಿನ ಸುಮಾರು 28,000 ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಕಲ್ಪಿಸಲು ಹೊರ್ತಿ-ರೇವಣಸಿದ್ದೇಶ್ವರ ಏತ ನೀರಾವರಿ ಯೋಜನೆಯನ್ನು ಅನುಷ್ಠಾನಗೊಳಿಸಲು ಯೋಜಿಸಿದ್ದು, 2019-20ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಯೋಜನೆ ಘೋಷಿಸಲಾಗಿರುತ್ತದೆ. |
| ಆ) | ಹಾಗಿದ್ದಲ್ಲಿ, ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲು ಸರ್ಕಾರವು ಆಸಕ್ತಿ ಹೊಂದಿದೆಯೇ; | ಆಲಮಟ್ಟಿ ಜಲಾಶಯದ ಹಿನ್ನೀರಿನಿಂದ ನೀರನ್ನು ಲಿಫ್ಟ್ ಮಾಡಿ ಇಂಡಿ ತಾಲ್ಲೂಕಿನ ಸುಮಾರು 28,000 ಹೆಕ್ಟೇರ್ ಪ್ರದೇಶಕ್ಕೆ 3.245 ಟಿ.ಎಂ.ಸಿ. ನೀರಿನ ಬಳಕೆಯಿಂದ ನೀರಾವರಿ ಸೌಲಭ್ಯ ಕಲ್ಪಿಸಲು ಹೊರ್ತಿ-ರೇವಣಸಿದ್ದೇಶ್ವರ ಏತ ನೀರಾವರಿ ಯೋಜನೆಗೆ ರೂ.2639.00ಕೋಟಿ ಅಂದಾಜು ಪ್ರಸ್ತಾವನೆ ತಯಾರಿಸಲಾಗಿರುತ್ತದೆ. |
| ಇ) | ಹೊಂದಿದ್ದಲ್ಲಿ, ಈ ಯೋಜನೆಯ ರೂಪು ರೇಷೆಗಳೇನು; ಪ್ರಸ್ತುತ ಯೋಜನೆ ಯಾವ ಹಂತದಲ್ಲಿದೆ; (ವಿವರ ನೀಡುವುದು); | |
| ಈ) | ಸದರಿ ವಿಷಯದ ಬಗ್ಗೆ ನಿಗಮದ ತಾಂತ್ರಿಕ ಉಪ ಸಮಿತಿಯ ಸಭೆಯಲ್ಲಿ (ಟಿ.ಎಸ್.ಸಿ) ಚರ್ಚಿಸಲಾಗಿದೆಯೇ; ಚರ್ಚಿಸಿದ್ದಲ್ಲಿ ಸಭಾ ನಡವಳಿಯ ಪ್ರತಿಯನ್ನು ಲಗತ್ತಿಸಿ ಹಾಗೂ ಕೈಗೊಂಡಿರುವ ನಿರ್ಣಯಗಳೇನು: (ವಿವರ ನೀಡುವುದು); | ಸದರಿ ಯೋಜನಾ ವರದಿಯನ್ನು ದಿನಾಂಕ 04.05.2019ರಂದು ಜರುಗಿದ ಕೃಷ್ಣಾ ಭಾಗ್ಯ ಜಲ ನಿಗಮದ 13ನೇ ತಾಂತ್ರಿಕ ಉಪ ಸಮಿತಿ ಸಭೆಯಲ್ಲಿ ಚರ್ಚಿಸಿದ್ದು, ಸಮಿತಿಯು ಯೋಜನೆಗೆ ಅವಶ್ಯಕ ನೀರಿನ ಹಂಚಿಕೆಯೊಂದಿಗೆ ಸರ್ಕಾರದಿಂದ ಆಡಳಿತಾತ್ಮಕ ಅನುಮೋದನೆ ಪಡೆಯಲು ಮಾಡಿರುವ ಶಿಫಾರಸ್ಸಿನ ಮೇರೆಗೆ ದಿನಾಂಕ:9/7/2019ರಂದು ಜರುಗಿದ ನಿಗಮದ ನಿರ್ದೇಶಕರ ಮಂಡಳಿ ಸಭೆಯಲ್ಲಿ ಪ್ರಸ್ತಾಪಿತ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ಪಡೆಯಲು ತೀರುವಳಿ ನೀಡಿರುತ್ತದೆ. |

| | | |
|---|---|---|
| ಉ) | ಈ ಯೋಜನೆಯಿಂದ ಎಷ್ಟು ಹೆಕ್ಟೇರ್ ಪ್ರದೇಶವು ನೀರಾವರಿ ಸೌಲಭ್ಯವನ್ನು ಹೊಂದಲಿದೆ; ಈ ಯೋಜನೆಗೆ ನಿಗದಿಪಡಿಸಿರುವ ನೀರಿನ ಪ್ರಮಾಣವೆಷ್ಟು; ಮತ್ತು ಯೋಜನಾ ವೆಚ್ಚ ಎಷ್ಟು; (ವಿವರ ನೀಡುವುದು) | ಪ್ರಸ್ತಾಪಿತ ಹೊರ್ತಿ-ರೇವಣಸಿದ್ದೇಶ್ವರ ಯೋಜನೆಯಿಂದ 28,000 ಹೆಕ್ಟೇರ್ ಅಚ್ಚುಕಟ್ಟು ಪ್ರದೇಶಕ್ಕೆ ಪೈಪ್‌ಲೈನ್ ಜಾಲ ಅಳವಡಿಸಿ 3.245 ಟಿ.ಎಂ.ಸಿ. ನೀರಿನ ಹಂಚಿಕೆಯೊಂದಿಗೆ ನೀರಾವರಿ ಸೌಲಭ್ಯ ಕಲ್ಪಿಸಲು ರೂ.2639.66 ಕೋಟಿ (2018-19ನೇ ಸಾಲಿನ ದರಪಟ್ಟಿ) ಅಂದಾಜು ಮೊತ್ತಕ್ಕೆ ವಿಸ್ತೃತ ಯೋಜನಾ ವರದಿ ತಯಾರಿಸಲಾಗಿದೆ. |
| ಊ | ಈ ಯೋಜನೆಯು ಪ್ರಸ್ತುತ ಯಾವ ಹಂತದಲ್ಲಿದೆ; ಸದರಿ ಯೋಜನೆಗೆ ಯಾವಾಗ ಮಂಜೂರಾತಿ ನೀಡಲಾಗುವುದು; ಈ ಬಗ್ಗೆ ಸರ್ಕಾರ ಕೈಗೊಳ್ಳುವ ಕ್ರಮಗಳೇನು? (ವಿವರ ನೀಡುವುದು) | ಪ್ರಸ್ತಾವನೆಯು ಪರಿಶೀಲನೆಯಲ್ಲಿದೆ. |

ಸಂಖ್ಯೆ: ಜಸಂಇ 103 ಡಬ್ಲ್ಯೂಬಿಎಂ 2020

**(ರಮೇಶ್ ಲ. ಜಾರಕಿಹೊಳಿ)**
ಜಲ ಸಂಪನ್ಮೂಲ ಸಚಿವರು

B



ಕರ್ನಾಟಕ ಸರ್ಕಾರ

ಸಂಖ್ಯೆ:ಜಸಂಇ 107 ಡಬ್ಲ್ಯೂಬಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:14/12/2020.

**ಇಂದ:**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಜಲಸಂಪನ್ಮೂಲ ಇಲಾಖೆ,
ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನ ಸೌಧ, ಬೆಂಗಳೂರು.

**ಮಾನ್ಯರೆ,**

**ವಿಷಯ:**- ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ದೇವಾನಂದ್ ಫುಲಸಿಂಗ್ ಚವಾಣ್ (ನಾಗಠಾಣ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1837ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.

ಉಲ್ಲೇಖ:- ತಮ್ಮ ಪತ್ರ ಸಂಖ್ಯೆ:ಕವಿಸಸ/ಪ್ರಶಾ/249/ಬಾಉಪ್ರಉತ/2020 ದಿನಾಂಕ:14/10/2020.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖಿತ ತಮ್ಮ ಪತ್ರದಲ್ಲಿ ಕೋರಿರುವಂತೆ, ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ದೇವಾನಂದ್ ಫುಲಸಿಂಗ್ ಚವಾಣ್ (ನಾಗಠಾಣ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1837ಕ್ಕೆ ಸಂಬಂಧಿಸಿದ ಉತ್ತರದ 20 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲಾಗಿದೆ.

ತಮ್ಮ ವಿಶ್ವಾಸಿ,

(ರವೀಂದ್ರ ಕೊಂಡ)
ಸರ್ಕಾರದ ಅಧೀನ ಕಾರ್ಯದರ್ಶಿ(ತಾಂತ್ರಿಕ-5)
ಜಲ ಸಂಪನ್ಮೂಲ ಇಲಾಖೆ

Received
14/12/2020

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1837
ಸದಸ್ಯರ ಹೆಸರು : ಶ್ರೀ ದೇವಾನಂದ್ ಫುಲಸಿಂಗ್ ಚವಾಣ್ (ನಾಗಠಾಣ)
ಉತ್ತರಿಸುವ ದಿನಾಂಕ : 29.09.2020
ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರ ಸಂ: | ಪ್ರಶ್ನೆ | ಉತ್ತರ |
|---|---|---|
| ಅ) | ನಾಗಠಾಣಾ ವಿಧಾನ ಸಭಾ ಕ್ಷೇತ್ರದ ಎಷ್ಟು ಕೆರೆಗಳನ್ನು ಕೆರೆ ತುಂಬಿಸುವ ಯೋಜನೆಯಲ್ಲಿ ಸೇರಿಸಲಾಗಿದೆ; ಈ ಬಗ್ಗೆ ಮೀಸಲಿರಿಸಿದ ಅನುದಾನವೆಷ್ಟು; | ನಾಗಠಾಣ ವಿಧಾನ ಸಭಾ ಕ್ಷೇತ್ರದಡಿಯಲ್ಲಿ ಈ ಕೆಳಕಂಡ ಯೋಜನೆಗಳಿಂದ ಕೆರೆಗಳಿಗೆ ನೀರನ್ನು ತುಂಬಿಸಲಾಗುತ್ತಿದೆ.<br>(ಅ) **ಸಂಖ್ ಕೆರೆ ತುಂಬುವ ಯೋಜನೆ:**<br>(1) ಚಡಚಣ (2) ಜೀರಂಕಲಗಿ (3) ಗೋಡಿಹಾಳ (4) ಲೋಣಿ (5) ಸಾತಲಗಾಂವ (6) ದೇವರನಿಂಬರಗಿ (7) ಜಿಗಜೀವಣಗಿ (8) ಇಂಚಗೇರಿ.<br>2020-21ನೇ ಸಾಲಿಗೆ ರೂ.13.31. ಲಕ್ಷ ಮೀಸಲಿರಿಸಲಾಗಿದೆ.<br>(ಆ) **ಚಿಮ್ಮಲಗಿ ಏತ ನೀರಾವರಿ ಯೋಜನೆ:**<br>ಚಿಮ್ಮಲಗಿ ಏತ ನೀರಾವರಿ ಯೋಜನೆ ಅಡಿಯಲ್ಲಿ ಬರುವ ನಾಗಠಾಣ ಶಾಖಾ ಕಾಲುವೆಯ ವಿತರಣಾ ಕಾಲುವೆಗಳ ಜಾಲದಿಂದ ಗುರುತ್ವ ಮೂಲಕ ವಿಜಯಪುರ ತಾಲ್ಲೂಕಿನ ಅಹೇರಿ, ಜಂಬಗಿ ಕೆರೆಯನ್ನು ತುಂಬಿಸಲು ಯೋಜಿಸಲಾಗಿದ್ದು, ವಿತರಣಾ ಕಾಲುವೆಗಳ ಜಾಲದ ಕಾಮಗಾರಿಗಳು ಪೂರ್ಣಗೊಂಡಿದ್ದು, ನಾಗಠಾಣ ಶಾಖಾ ಕಾಲುವೆಯ ಕಾಮಗಾರಿ ಪೂರ್ಣಗೊಳ್ಳಬೇಕಾಗಿದ್ದು, ಸದರಿ ಕಾಮಗಾರಿ ಪೂರ್ಣಗೊಳಿಸಿದ ನಂತರ ಕೆರೆಯನ್ನು ತುಂಬಿಸಲಾಗುವುದು.<br>ಮೇಲಿನ ಕಾಮಗಾರಿಗಾಗಿ 2020-21ನೇ ಸಾಲಿಗೆ ರೂ.28.47 ಲಕ್ಷ ಮೀಸಲಿರಿಸಲಾಗಿದೆ.<br>(ಇ) **ಮುಳವಾಡ ಏತ ನೀರಾವರಿ ಯೋಜನೆ:** ಮುಳವಾಡ ಏತ ನೀರಾವರಿ ಯೋಜನೆ ಹಂತ-3ರ ಕಾಲುವೆ ಜಾಲದಿಂದ ಈ ಕೆಳಕಂಡ ಸಣ್ಣ ನೀರಾವರಿ ಮತ್ತು ಜಿಲ್ಲಾ ಪಂಚಾಯತ್ ಕೆರೆಗಳನ್ನು ತುಂಬಿಸಲಾಗುತ್ತಿದೆ.<br>(1)ಕುಮಟಗಿ (ಹಳೆ) (2) ಕುಮಟಗಿ (ಹೊಸ) (3) ಅಹೇರಿ (4) ಕಗ್ಗೋಡ (5) ಅಂಕಲಗಿ (6) ಕವಲಗಿ-ಅಹೇರಿ (7) ಮಕಣಾಪುರ (8) ಬಮ್ಮನಹಳ್ಳಿ (9) ದ್ಯಾಬೇರಿ (10) ಡೊಮನಾಳ (11) ಅಲಿಯಾಬಾದ (12) ಮದಭಾವಿ ಜಿಲ್ಲಾ ಪಂಚಾಯತ್ ಕೆರೆ (13) ನಾಗಠಾಣ ಮಧ್ಯಮ ನೀರಾವರಿ ಕೆರೆ.<br>ಮೇಲಿನ ಕಾಮಗಾರಿಗಳಿಗಾಗಿ 2020-21ನೇ ಸಾಲಿಗೆ ರೂ.150.00 ಲಕ್ಷ ಮೀಸಲಿರಿಸಲಾಗಿದೆ. |
| ಆ) | ಕೆರೆ ತುಂಬುವ ಯೋಜನೆಯಡಿ ಬಿಟ್ಟು ಹೋಗಿರುವ ಕೆರೆಗಳನ್ನು ತುಂಬಿಸಲು ಕೈಗೊಂಡ ಕ್ರಮಗಳೇನು; | ನಾಗಠಾಣ ವಿಧಾನ ಸಭಾ ಕ್ಷೇತ್ರದಲ್ಲಿ<br>❖ ಗೋಟ್ಯಾಳ ಮತ್ತು ಮಣಂಕಲಗಿ ಕೆರೆಗಳು ರೇವಣಸಿದ್ದೇಶ್ವರ ಏತ ನೀರಾವರಿ ಯೋಜನೆಯ ಅಚ್ಚುಕಟ್ಟು ಪ್ರದೇಶದಲ್ಲಿ ಬರುವುದರಿಂದ ಸದರಿ ಯೋಜನೆಯಿಂದ ತುಂಬಿಸಲಾಗುವುದು.<br>❖ ನಂದರಗಿ ಕೆರೆಯು ತಿಡಗುಂದಿ ಶಾಖಾ ಕಾಲುವೆಯ ಅಚ್ಚುಕಟ್ಟು ಪ್ರದೇಶದಲ್ಲಿ ಬರುವುದರಿಂದ ಸದರಿ ಯೋಜನೆಯ 16 ಕೆರೆಗಳನ್ನು ತುಂಬಿಸುವ ಪ್ರಸ್ತಾವನೆಯಲ್ಲಿ ಒಳಗೊಂಡಿದ್ದು, ಯೋಜನೆಗೆ ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆದ ನಂತರ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲಾಗುವುದು. |

| | | |
|---|---|---|
| ಇ) | ತಿಡುಗುಂದಿ ಶಾಖಾ ಕಾಲುವೆ ಹಾಗೂ ನಾಗಠಾಣ ಮುಖ್ಯ ಕಾಲುವೆಯ ವಿಸ್ತೀರ್ಣ ಹಾಗೂ ಉದ್ದ ಎಷ್ಟು; ಸದರಿ ಕಾಲುವೆಗಳ ನಿರ್ಮಾಣಕ್ಕೆ ಬಿಡುಗಡೆಯಾದ ಅನುದಾನವೆಷ್ಟು; | **ತಿಡಗುಂದಿ ಶಾಖಾ ಕಾಲುವೆ** ಯ ವಿಸ್ತೀರ್ಣ 25,770 ಹೆಕ್ಟೇರ್ ಕ್ಷೇತ್ರ ಹೊಂದಿದ್ದು, ಉದ್ದ 65.585 ಕಿ.ಮೀ. ಇದೆ. ಈ ಕಾಲುವೆಯ ನಿರ್ಮಾಣಕ್ಕೆ ಇದುವರೆಗೆ ರೂ.52,466.16 ಲಕ್ಷ ಅನುದಾನವು ಬಿಡುಗಡೆಯಾಗಿರುತ್ತದೆ.<br><br>**ನಾಗಠಾಣ ಮುಖ್ಯ ಕಾಲುವೆ** ಯ ವಿಸ್ತೀರ್ಣ 29,403 ಹೆಕ್ಟೇರ್ ಕ್ಷೇತ್ರ ಹೊಂದಿದ್ದು, ಮುಖ್ಯ ಕಾಲುವೆಯ ಉದ್ದ 105.98 ಕಿ.ಮೀ. ಇರುತ್ತದೆ. ಈ ಕಾಲುವೆಯ ನಿರ್ಮಾಣಕ್ಕೆ ಇದುವರೆಗೆ ರೂ.22,667.79 ಲಕ್ಷ ಅನುದಾನ ಬಿಡುಗಡೆಯಾಗಿರುತ್ತದೆ. |
| ಈ | ಇದರಲ್ಲಿ ಕೈಗೊಂಡ ಕಾಮಗಾರಿಗಳಾವುವು ಹಾಗೂ ಪೂರ್ಣಗೊಂಡ ಕಾಮಗಾರಿಗಳು ಎಷ್ಟು; ಅಪೂರ್ಣಗೊಂಡ ಕಾಮಗಾರಿಗಳು ಯಾವುವು; ಅಪೂರ್ಣಗೊಳ್ಳಲು ಕಾರಣಗಳೇನು (ವಿವರವಾದ ಮಾಹಿತಿ ನೀಡುವುದು) | **ತಿಡಗುಂದಿ ಶಾಖಾ ಕಾಲುವೆ** 0.00 ಕಿ.ಮೀ.ಯಿಂದ 40.00ರವರೆಗಿನ ಕಾಮಗಾರಿಗಳು ಪೂರ್ಣಗೊಂಡಿದೆ. 40.00 ರಿಂದ 56.00 ಕಿ.ಮೀ. ಕಾಮಗಾರಿಯು ಪ್ರಗತಿಯಲ್ಲಿರುತ್ತದೆ. 56.00 ಕಿ.ಮೀ. ಯಿಂದ 65.585 ಕಿ.ಮೀ. ವರೆಗಿನ ಕಾಮಗಾರಿಯು (ತಡವಲಗಾ, ಅಥರ್ಗಾ ಮತ್ತು ಹಂಜಗಿ ಕೆರೆಗಳನ್ನು ತುಂಬಿಸುವ ಪೈಪ್‌ಲೈನ್ ಜಾಲ ಮಾತ್ರ ಒಳಗೊಂಡಿರುತ್ತದೆ) ಸದರಿ ಕಾಮಗಾರಿಯ ಟೆಂಡರ್ ನ ಆರ್ಥಿಕ ಬಿಡ್‌ನ್ನು ನಿಗಮದ ನಿರ್ದೇಶಕರ ಮಂಡಳಿಯ ಅನುಮೋದನೆಯೊಂದಿಗೆ ಕಾಮಗಾರಿಯನ್ನು ಪ್ರಾರಂಭಿಸಲಾಗುವುದು.<br><br>ಈ ಯೋಜನೆಯಡಿಯಲ್ಲಿ ಯಾವುದೇ ಕಾಮಗಾರಿಗಳು ಅಪೂರ್ಣ ಗೊಂಡಿರುವುದಿಲ್ಲ.<br><br>**ನಾಗಠಾಣ ಮುಖ್ಯ ಕಾಲುವೆ** 0.00 ರಿಂದ 105.60 ಕಾಮಗಾರಿಗಳನ್ನು ಒಟ್ಟು 8 ಪ್ಯಾಕೇಜ್‌ಗಳನ್ನು ಮಾಡಿ ನಿರ್ವಹಿಸಲಾಗುತ್ತಿದೆ. ಇವುಗಳಲ್ಲಿ ಕಿ.ಮೀ.20.00 ರಿಂದ 40.00 ಮತ್ತು ಕಿ.ಮಿ. 50.00 ರಿಂದ 80.00 ಪ್ಯಾಕೇಜ್‌ಗಳು ಪೂರ್ಣಗೊಂಡಿದ್ದು, ಬಾಕಿ ಉಳಿದ ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ.<br><br>**ನಾಗಠಾಣ ಶಾಖಾ ಕಾಲುವೆ** ಯ ಕಾಮಗಾರಿ ಪ್ಯಾಕೇಜ್ ಕಿ.ಮಿ. 0.00 ರಿಂದ 20.00 ಕಿ.ಮೀ. ಭೌತಿಕವಾಗಿ ಪೂರ್ಣಗೊಂಡಿರುತ್ತವೆ. ಕಿ.ಮೀ. 40.00 ರಿಂದ 50.00 ಭೂಸ್ವಾಧೀನದ 2 ಪ್ರಕರಣಗಳು ನ್ಯಾಯಾಲಯದಲ್ಲಿ ಇರುವುದರಿಂದ ಪೂರ್ಣಗೊಂಡಿರುವುದಿಲ್ಲ. |
| ಉ | ನಾಗಠಾಣ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಚಡಚಣ ತಾಲ್ಲೂಕಿನ ಕೆರೆಗಳ ನೀರು ತುಂಬಿಸುವ ಸಂಖ್ ಏತ ನೀರಾವರಿ ಯೋಜನೆಯು ಕೆರೆ ತುಂಬಿಸುವಲ್ಲಿ ವಿಫಲಗೊಂಡಿದ್ದು ಕೆರೆಗಳಿಗೆ ನೀರು ಬಾರದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು; (ವಿವರವಾದ ಮಾಹಿತಿ ನೀಡುವುದು) | ನಾಗಠಾಣ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯ ಚಡಚಣ ತಾಲ್ಲೂಕಿನ ಕೆರೆಗಳ ನೀರು ತುಂಬಿಸುವ ಸಂಖ ಏತ ನೀರಾವರಿ ಯೋಜನೆಯಿಂದ ಭೀಮಾ ನದಿಯಿಂದ 90 ದಿನಗಳ ಅವಧಿಯವರೆಗೆ ನೀರಿನ ಲಭ್ಯತೆಗೆ ಅನುಸಾರವಾಗಿ ನೀರನ್ನು ಎತ್ತಿ ಯೋಜಿತ 8 ಕೆರೆಗಳನ್ನು ತುಂಬಿಸಲಾಗುತ್ತಿದೆ. |

ಸಂಖ್ಯೆ: ಜಸಂಇ 107 ಡಬ್ಲ್ಯೂಬಿಎಮ 2020

**(ರಮೇಶ್ ಲ. ಜಾರಕಿಹೊಳಿ)**
ಜಲ ಸಂಪನ್ಮೂಲ ಸಚಿವರು

B



ಕರ್ನಾಟಕ ಸರ್ಕಾರ

ಸಂಖ್ಯೆ:ಜಸಂಇ 102 ಡಬ್ಲ್ಯೂಬಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:14/12/2020.

**ಇಂದ:**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಜಲಸಂಪನ್ಮೂಲ ಇಲಾಖೆ,
ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನ ಸೌಧ, ಬೆಂಗಳೂರು.

**ಮಾನ್ಯರೆ,**

**ವಿಷಯ:**- ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:634ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.

ಉಲ್ಲೇಖ:- ತಮ್ಮ ಪತ್ರ ಸಂಖ್ಯೆ:ಕವಿಸಸ/ಪ್ರಶಾ/249/ಬಾಉಪ್ರಉತ/2020 ದಿನಾಂಕ:14/10/2020.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖಿತ ತಮ್ಮ ಪತ್ರದಲ್ಲಿ ಕೋರಿರುವಂತೆ, ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:634ಕ್ಕೆ ಸಂಬಂಧಿಸಿದ ಉತ್ತರದ 20 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲಾಗಿದೆ.

ತಮ್ಮ ವಿಶ್ವಾಸಿ,

(ರವೀಂದ್ರ ಕೊಂಡ)
ಸರ್ಕಾರದ ಅಧೀನ ಕಾರ್ಯದರ್ಶಿ(ತಾಂತ್ರಿಕ-5)
ಜಲ ಸಂಪನ್ಮೂಲ ಇಲಾಖೆ

Received
14/12/2020

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : 634 |
| ಸದಸ್ಯರ ಹೆಸರು | : ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ) |
| ಉತ್ತರಿಸುವ ದಿನಾಂಕ | : 29.09.2020 |
| ಉತ್ತರಿಸುವ ಸಚಿವರು | : ಜಲಸಂಪನ್ಮೂಲ ಸಚಿವರು |

| ಕ್ರ ಸಂ: | ಪ್ರಶ್ನೆ | ಉತ್ತರ |
|---|---|---|
| ಅ) | ಕೃಷ್ಣಾ ಮೇಲ್ದಂಡೆ ಯೋಜನೆ ಹಂತ-3 ರ ಯೋಜನೆಯಡಿ ಆಲಮಟ್ಟಿ ಜಲಾಶಯದ ಎತ್ತರವನ್ನು 519.60 ಮೀಟರ್‌ನಿಂದ 524.256 ಮೀಟರ್‌ಗಳಿಗೆ ಎತ್ತರಿಸಲು ಸರ್ಕಾರ ಆಸಕ್ತಿ ಹೊಂದಿದೆಯೇ; | ಕೃಷ್ಣಾ ನ್ಯಾಯಾಧೀಕರಣ-2ರ ತೀರ್ಪಿನನ್ವಯ ಕೃಷ್ಣಾ ಮೇಲ್ದಂಡೆ ಯೋಜನೆ ಹಂತ-3ರ ಆಲಮಟ್ಟಿ ಜಲಾಶಯದ ನೀರಿನ ಸಂಗ್ರಹಣೆಯನ್ನು ಆರ್.ಎಲ್ 519.60 ಮೀ. ನಿಂದ ಆರ್.ಎಲ್ 524.256 ಮೀ.ಗೆ (4.656 ಮೀ.) ಎತ್ತರಿಸುವುದಾಗಿರುತ್ತದೆ.<br><br>ಆಲಮಟ್ಟಿ ಜಲಾಶಯದ ನೀರಿನ ಸಂಗ್ರಹಣೆಯನ್ನು ಆರ್.ಎಲ್ 524.256 ಮೀ.ಗೆ ಎತ್ತರಿಸುವಿಕೆಯು ಕೃಷ್ಣಾ ನ್ಯಾಯಾಧೀಕರಣ-2ರ ಅಂತಿಮ ಐತೀರ್ಪು ಕೇಂದ್ರ ಸರ್ಕಾರದಿಂದ ಹೊರಡಿಸುವ ಅಧಿಸೂಚನೆಗೆ ಒಳಪಟ್ಟಿದ್ದು, ಐತೀರ್ಪು ಇನ್ನೂ ಅಧಿಸೂಚನೆಗೊಂಡಿರುವುದಿಲ್ಲ. |
| ಆ) | ಸದರಿ ಜಲಾಶಯದ ಮಟ್ಟವನ್ನು ಎತ್ತರಿಸುವುದರಿಂದ ಎಷ್ಟು ಟಿ.ಎಮ್.ಸಿ. ನೀರು ಹೆಚ್ಚುವರಿಯಾಗಿ ಲಭ್ಯವಾಗುವುದು; | ಆಲಮಟ್ಟಿ ಜಲಾಶಯದ ಮಟ್ಟವನ್ನು ಆರ್.ಎಲ್. 519.6 ಮೀ.ನಿಂದ ಆರ್.ಎಲ್.524.256ಮೀ.ಗೆ ಎತ್ತರಿಸುವುದರಿಂದ ಹೆಚ್ಚುವರಿಯಾಗಿ 100 ಟಿ.ಎಂ.ಸಿ. ನೀರು ಸಂಗ್ರಹಣೆಯಾಗಲಿದೆ. |
| ಇ) | ಹೆಚ್ಚುವರಿ ನೀರಿನಿಂದ ಎಷ್ಟು ಜಿಲ್ಲೆಗಳ ಎಷ್ಟು ಹೆಕ್ಟೇರ್ ಭೂಮಿಗೆ ನೀರಾವರಿ ಸೌಲಭ್ಯ ಕಲ್ಪಿಸಬಹುದಾಗಿದೆ; | ಸಂಗ್ರಹಣೆಯಾಗಲಿರುವ ಹೆಚ್ಚುವರಿ ನೀರಿನಿಂದ ಕೃ.ಮೇ.ಯೋ ಹಂತ-3ರಡಿ 09 ಉಪ ಯೋಜನೆಗಳ ಅನುಷ್ಠಾನದ ಮೂಲಕ ಉತ್ತರ ಕರ್ನಾಟಕದ 7 ಜಿಲ್ಲೆಗಳ 5,94,000 ಹೆ. ಕ್ಷೇತ್ರಕ್ಕೆ ನೀರಾವರಿ ಸೌಲಭ್ಯ ಕಲ್ಪಿಸಲು ಉದ್ದೇಶಿಸಲಾಗಿದೆ. |
| ಈ) | ಅಣೆಕಟ್ಟು ಎತ್ತರಿಸುವ ಕಾಮಗಾರಿ ವಿಳಂಬದಿಂದಾಗಿ ಯೋಜನಾ ವೆಚ್ಚ ಹೆಚ್ಚಳವಾಗುವುದಿಲ್ಲವೇ ಹಾಗೂ ಪ್ರತಿ ವರ್ಷ ಹೆಚ್ಚುವರಿ ನೀರು ಬೇರೆ ರಾಜ್ಯಗಳ / ಸಮುದ್ರದ ಪಾಲಾಗುತ್ತಿರುವುದು ಸರ್ಕಾರ ಗಮನಿಸಿದೆಯೇ; | ಕೃಷ್ಣಾ ನ್ಯಾಯಾಧೀಕರಣ-2 ರ ಅಂತಿಮ ತೀರ್ಪು ಕೇಂದ್ರ ಸರ್ಕಾರದಿಂದ ಗೆಜೆಟ್ ಅಧಿಸೂಚನೆ ಹೊರಡಿಸಲು ಕೇಂದ್ರ ಸರ್ಕಾರದ ಜೊತೆಗೆ ಸಮನ್ವಯ ಸಾಧಿಸುತ್ತಿದ್ದು, ಅಧಿಸೂಚನೆ ಹೊರಡಿಸಲು ಎಲ್ಲಾ ಸೂಕ್ತ ಕ್ರಮ ಕೈಗೊಳ್ಳಲಾಗುತ್ತಿದೆ.<br><br>ಈಗಾಗಲೇ, ಸರ್ಕಾರದ ಆಡಳಿತಾತ್ಮಕ ಅನುಮೋದನೆಯೊಂದಿಗೆ ಕೃಷ್ಣಾ ಮೇಲ್ದಂಡೆ ಯೋಜನೆ ಹಂತ-3 ರಡಿಯ ಎಲ್ಲಾ 9 ಉಪ ಯೋಜನೆಗಳಡಿ ಪ್ರಮುಖವಾಗಿ ಮುಖ್ಯ ಸ್ಥಾವರಗಳು,ಮ ಮುಖ್ಯ ಕಾಲುವೆ/ಶಾಖಾ ಕಾಲುವೆ ಜಾಲಗಳ ಕಾಮಗಾರಿಗಳನ್ನು ಪ್ರಾರಂಭಿಸಲಾಗಿದ್ದು, ಪೂರ್ಣಗೊಂಡ ಕಾಲುವೆ ಜಾಲಗಳಡಿ ಪ್ರಾಯೋಗಿಕವಾಗಿ ನೀರು ಹರಿಸಲಾಗುತ್ತಿದೆ. |
| ಉ) | ಸದರಿ ಜಲಾಶಯದ ಮಟ್ಟ ಎತ್ತರಿಸಲು ಭೂಸ್ವಾಧೀನ ಮತ್ತು ಪುನರ್ವಸತಿ ಉದ್ದೇಶಕ್ಕೆ ಬೇಕಾಗುವ ಅನುದಾನ ಎಷ್ಟು; (ವಿವರ ನೀಡುವುದು) | ಸರ್ಕಾರದ ಆದೇಶ ದಿನಾಂಕ 09.10.2017 ರನ್ವಯ ಕೃ.ಮೇ.ಯೋ ಹಂತ-3ರ ಯೋಜನೆಗೆ ರೂ.51,148.94 ಕೋಟಿ ಪರಿಷ್ಕೃತ ಅಂದಾಜು ಮೊತ್ತಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಈ ಪೈಕಿ ಭೂಸ್ವಾಧೀನ ಮತ್ತು ಪುನರ್ವಸತಿ ಗಾಗಿ ಅಂದಾಜಿಸಲಾದ ಮೊತ್ತ ರೂ.30,143.17 ಕೋಟಿ ಆಗಿರುತ್ತದೆ. |
| ಊ | ಭೂಸ್ವಾಧೀನ ಮತ್ತು ಪುನರ್ ವಸತಿ ಕ್ರಮ ಕೈಗೊಳ್ಳಲು ಅನುದಾನ ಹಾಗೂ ಅವಶ್ಯಕ ಸಿಬ್ಬಂದಿಗಳು ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೃಷ್ಣಾ ಮೇಲ್ದಂಡೆ ಯೋಜನೆ ಹಂತ-3ರ ಯೋಜನೆಗಳನ್ನು ತ್ವರಿತಗತಿಯಲ್ಲಿ ಪೂರ್ಣಗೊಳಿಸಲು ಖಾಲಿ ಇರುವ ಹುದ್ದೆಗಳಾದ ಆಯುಕ್ತರು-1, ಮಹಾವ್ಯವಸ್ಥಾಪಕರು-1, ವಿಶೇಷ ಭೂಸ್ವಾಧೀನಾಧಿಕಾರಿಗಳು-11 ಹಾಗೂ ಪುನರ್ ವಸತಿ ಅಧಿಕಾರಿ-5 ನ್ನು ಒಳಗೊಂಡಂತೆ ಎಲ್ಲಾ ಶಾಸನಬದ್ಧ ಹುದ್ದೆಗಳಲ್ಲಿ ಭರ್ತಿ ಮಾಡಲು ಅಗತ್ಯ ಕ್ರಮ ಜರುಗಿಸಲಾಗುತ್ತಿದೆ. |

| | | |
|---|---|---|
| ಐ | ಈ ಯೋಜನೆಗೆ ಪ್ರಸಕ್ತ ಸಾಲಿನಲ್ಲಿ ಬೇಕಾಗುವ ಹಾಗೂ ಕಾಯ್ದಿರಿಸುವ ಅನುದಾನ ಎಷ್ಟು; ಸದರಿ ಜಲಾಶಯವನ್ನು ಎತ್ತರಿಸಲು ತುರ್ತಾಗಿ ಸರ್ಕಾರ ಕೈಗೊಳ್ಳುವ ಕ್ರಮಗಳೇನು; (ವಿವರ ನೀಡುವುದು) | ಪ್ರಸಕ್ತ ಸಾಲಿನಲ್ಲಿ ಕೃಷ್ಣಾ ಭಾಗ್ಯ ಜಲ ನಿಗಮಕ್ಕೆ 2020-21ನೇ ಸಾಲಿಗಾಗಿ ರೂ.6446.84 ಕೋಟಿ (ಪ್ರಾರಂಭಿಕ ಶಿಲ್ಕು ಒಳಗೊಂಡಂತೆ) ಅನುದಾನ ಹಂಚಿಕೆಯಾಗಿರುತ್ತದೆ. ಈ ಪೈಕಿ ಕೃ.ಮೇ.ಯೋ ಹಂತ-3 (ಭೂಸ್ವಾಧೀನ, ಪು&ಪು ಒಳಗೊಂಡಂತೆ) ಯೋಜನೆಗಳ ಅನುಷ್ಠಾನಕ್ಕಾಗಿ ರೂ.2292.20 ಕೋಟಿ ಅನುದಾನವನ್ನು ಮೀಸಲಿಡಲಾಗಿರುತ್ತದೆ.<br><br>ಕೃಷ್ಣಾ ನ್ಯಾಯಾಧೀಕರಣ-2 ರ ಅಂತಿಮ ತೀರ್ಪು ಕೇಂದ್ರ ಸರ್ಕಾರದಿಂದ ಗೆಜೆಟ್ ಅಧಿಸೂಚನೆ ಹೊರಡಿಸಲು ಕೇಂದ್ರ ಸರ್ಕಾರದ ಜೊತೆಗೆ ಸಮನ್ವಯ ಸಾಧಿಸುತ್ತಿದ್ದು, ಅಧಿಸೂಚನೆ ಹೊರಡಿಸಲು ಎಲ್ಲಾ ಸೂಕ್ತ ಕ್ರಮ ಕೈಗೊಳ್ಳಲಾಗುತ್ತಿದೆ. |
| ಒ | ಆಲಮಟ್ಟಿ ಜಲಾಶಯವನ್ನು ರಾಷ್ಟ್ರೀಯ ಸಂಪತ್ತು ಎಂದು ಘೋಷಿಸಿ ಕೇಂದ್ರ ಸರ್ಕಾರದಿಂದ ಹೆಚ್ಚಿನ ಅನುದಾನವನ್ನು ಪಡೆದು ಜಲಾಶಯದ ಮಟ್ಟವನ್ನು ಎತ್ತರಗೊಳಿಸಲು ಸರ್ಕಾರವು ಕ್ರಮ ಕೈಗೊಳ್ಳುವುದೇ; | |
| ಓ | ಈ ಬಗ್ಗೆ ರಾಜ್ಯ ಸರ್ಕಾರದ ಸ್ಪಷ್ಟ ನಿಲುವೇನು? (ವಿವರ ನೀಡುವುದು) | |

ಸಂಖ್ಯೆ: ಜಸಂಇ 102 ಡಬ್ಲ್ಯೂಬಿಎಂ 2020

(ರಮೇಶ್ ಲ. ಜಾರಕಿಹೊಳಿ)
ಜಲ ಸಂಪನ್ಮೂಲ ಸಚಿವರು

# ಕರ್ನಾಟಕ ಸರ್ಕಾರ

ಸಂಖ್ಯೆ: ಇಎನ್ 134 ಪಿಪಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:18.12.2020.

**ಇವರಿಂದ:**

ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಇಂಧನ ಇಲಾಖೆ,
ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಅಭಯ್ ಪಾಟೀಲ್ (ಬೆಳಗಾಂ ದಕ್ಷಿಣ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:3293ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಅಭಯ್ ಪಾಟೀಲ್ (ಬೆಳಗಾಂ ದಕ್ಷಿಣ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:3293ಕ್ಕೆ ಉತ್ತರಗಳ 5 ಪ್ರತಿಗಳನ್ನು ಲಗತ್ತಿಸಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

(ಶಾಂತಾರಾಮ್)
ಶಾಖಾಧಿಕಾರಿ
ಇಂಧನ ಇಲಾಖೆ.

Recd
19/12/2020

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3293

ಸದಸ್ಯರ ಹೆಸರು : ಶ್ರೀ ಅಭಯ್ ಪಾಟೀಲ್ (ಬೆಳಗಾಂ ದಕ್ಷಿಣ)

ಉತ್ತರಿಸಬೇಕಾದ ದಿನಾಂಕ : 31-03-2020

ಉತ್ತರಿಸುವ ಸಚಿವರು : ಮುಖ್ಯಮಂತ್ರಿ

***

| | ಪ್ರಶ್ನೆ | | ಉತ್ತರ |
|---|---|---|---|
| ಅ) | ಬೆಳಗಾವಿ ತಾಲ್ಲೂಕಿನಲ್ಲಿ ಇಂಧನ ಇಲಾಖೆಯಿಂದ ಕಳೆದ ಮೂರು ವರ್ಷಗಳಲ್ಲಿ ಎಷ್ಟು ಫಲಾನುಭವಿಗಳಿಗೆ ಭಾಗ್ಯಜ್ಯೋತಿ/ ನಿರಂತರಜ್ಯೋತಿ ಹಾಗೂ ಅಕ್ರಮ-ಸಕ್ರಮ ಯೋಜನೆಯ ಸೌಲಭ್ಯಗಳು ಮಂಜೂರಾಗಿವೆ (ವಿಧಾನಸಭಾ ಮತಕ್ಷೇತ್ರವಾರು, ಯೋಜನೆವಾರು ಹಾಗೂ ಗ್ರಾಮವಾರು ಫಲಾನುಭವಿಗಳ ಹೆಸರುಗಳನ್ನು ನೀಡುವುದು) | ಅ) ಮತ್ತು ಆ) | ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯಲ್ಲಿ ಭಾಗ್ಯಜ್ಯೋತಿ ಯೋಜನೆಯು ಪ್ರಸ್ತುತ ಚಾಲ್ತಿಯಲ್ಲಿರುವುದಿಲ್ಲ.<br>ಬೆಳಗಾವಿ ತಾಲೂಕಿನ ವ್ಯಾಪ್ತಿಯಲ್ಲಿ 2017-18 ನೇ ಸಾಲಿನಲ್ಲಿ ನಿರಂತರ ಜ್ಯೋತಿ ಯೋಜನೆಯಡಿಯಲ್ಲಿ ಕಾಮಗಾರಿಗಳನ್ನು ಮುಕ್ತಾಯಗೊಳಿಸಿ ಎಲ್ಲಾ 156 ಗ್ರಾಮಗಳಿಗೆ ಸರ್ಕಾರದ ಆದೇಶದಂತೆ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ. ಸದರಿ ಯೋಜನೆಯ ವಿಧಾನಸಭಾ ಕ್ಷೇತ್ರವಾರು ಮತ್ತು ಗ್ರಾಮವಾರು ವಿವರಗಳನ್ನು ಅನುಬಂಧ-1ರಲ್ಲಿ ಒದಗಿಸಿದೆ.<br>ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ಇಎನ್ 41 ವಿಎಸ್‌ಸಿ 2014/ಪಿ1, ದಿನಾಂಕ:14-7-2014 ಮತ್ತು 23-7-2020 ರಂತೆ ನೀರಾವರಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲು ಅಕ್ರಮ-ಸಕ್ರಮ ಹಾಗೂ ಹೊಸದಾಗಿ ನೊಂದಾಯಿಸಲ್ಪಡುವ ಪಂಪ್‌ಸೆಟ್‌ಗಳು ಎಂಬ ಭೇದವಿಲ್ಲದೇ ವಿದ್ಯುತ್ ಸಂಪರ್ಕ ಕಲ್ಪಿಸಲಾಗುತ್ತಿದೆ.<br>ಕಳೆದ ಮೂರು ವರ್ಷಗಳಲ್ಲಿ ಬೆಳಗಾವಿ ತಾಲೂಕಿನಲ್ಲಿ 715 ಸಂಖ್ಯೆಯ ರೈತರು ಹಣವನ್ನು ಪಾವತಿಸಿದ್ದು, ಅವುಗಳಲ್ಲಿನ 251 ಸಂಖ್ಯೆಯ ಪಂಪ್ ಸೆಟ್‌ಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಿದ್ದು, 107 ಸಂಖ್ಯೆಯ ಮೂಲಸೌಕರ್ಯ ಕಾಮಗಾರಿಗಳು ಪ್ರಗತಿಯಲ್ಲಿವೆ. ಇನ್ನುಳಿದ 357 ಕಾಮಗಾರಿಗಳ ಟೆಂಡರಿಂಗ್ ಕಾರ್ಯವು ಪ್ರಗತಿಯಲ್ಲಿರುತ್ತದೆ. ಸದರಿ ಯೋಜನೆಯಡಿ ನೋಂದಾಯಿಸಿದ ರೈತರ ವಿವರಗಳನ್ನು ಅನುಬಂಧ-2 ರಲ್ಲಿ ಒದಗಿಸಲಾಗಿದೆ. |
| ಆ) | ಈ ತಾಲ್ಲೂಕಿನ ಕೆಲವು ಕಡೆಗಳಲ್ಲಿ ಈವರೆಗೆ ಸದರಿ ಯೋಜನೆಯ ಸೌಲಭ್ಯವು ಅನುಷ್ಠಾನಗೊಳ್ಳದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? ಹಾಗಿದ್ದಲ್ಲಿ, ಯಾವ ಯಾವ ಗ್ರಾಮಗಳಲ್ಲಿ ಅನುಷ್ಠಾನ ಗೊಂಡಿರುವುದಿಲ್ಲ ಹಾಗೂ ಇದಕ್ಕೆ ಕಾರಣವೇನು? | | |
| ಇ) | ಸಾರ್ವಜನಿಕರಿಗೆ ಆಗಿರುವ ಮತ್ತು ಆಗುತ್ತಿರುವ ತೊಂದರೆಯನ್ನು ಹಾಗೂ ಸರ್ಕಾರದ ಆರ್ಥಿಕ ಹಿತದೃಷ್ಟಿಯನ್ನು ಗಮನದಲ್ಲಿರಿಸಿಕೊಂಡು ತಪ್ಪಿತಸ್ಥರ ವಿರುದ್ಧ ಯಾವುದಾದರೂ ಕ್ರಮವನ್ನು ತೆಗೆದುಕೊಳ್ಳಲಾಗಿದೆಯೇ? | ಇ) ಮತ್ತು ಈ) | ನಿರಂತರ ಜ್ಯೋತಿ ಯೋಜನೆಯನ್ನು ಬೆಳಗಾವಿ ತಾಲೂಕಿನಲ್ಲಿ ಸಮರ್ಪಕವಾಗಿ ಅನುಷ್ಠಾನಗೊಳಿಸಿರುವುದರಿಂದ ಸಾರ್ವಜನಿಕರಿಗೆ ತೊಂದರೆಯಾಗಿರುವುದಿಲ್ಲ. ಅಕ್ರಮ-ಸಕ್ರಮ ಯೋಜನೆಯಡಿಯಲ್ಲಿನ ಫಲಾನುಭವಿಗಳ ಕಾಮಗಾರಿಗಳನ್ನು ಸಹ ಆದ್ಯತೆಯ ಮೇರೆಗೆ ಕೈಗೊಳ್ಳಲಾಗುತ್ತಿದೆ. |
| ಈ) | ಕ್ರಮ ತೆಗೆದುಕೊಂಡಿದ್ದಲ್ಲಿ, ಯಾವ ಕ್ರಮವನ್ನು ತೆಗೆದುಕೊಳ್ಳಲಾಗಿದೆ? ಇಲ್ಲವಾದಲ್ಲಿ, ಯಾವಾಗ ಕ್ರಮ ತೆಗೆದುಕೊಳ್ಳಲಾಗುವುದು? (ವಿಧಾನಸಭಾ ಮತಕ್ಷೇತ್ರವಾರು, ಯೋಜನೆವಾರು ಹಾಗೂ ಗ್ರಾಮವಾರು ಫಲಾನುಭವಿಗಳ ಹೆಸರುಗಳನ್ನು ನೀಡುವುದು? | | |

| | | | |
|---|---|---|---|
| ಉ) | ಸದರಿ ತಾಲ್ಲೂಕಿನ ವ್ಯಾಪ್ತಿಯ ಗ್ರಾಮಗಳಲ್ಲಿರುವ ಟ್ರಾನ್ಸ್ಫಾರ್ಮರ್ಗಳ ಸಂಖ್ಯೆ ಎಷ್ಟು? ಅವು ಅಗತ್ಯಕ್ಕಿಂತ ಕಡಿಮೆ ಇರುವುದರಿಂದ ಓವರ್ ಲೊಡ್ ಆಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? ಬಂದಿದ್ದಲ್ಲಿ ಯಾವ ಗ್ರಾಮದ ಯಾವ ಟಿ.ಸಿ.ಗಳಿಗೆ ಓವರ್ ಲೋಡ್ ಆಗಿದೆ? ಅದನ್ನು ಸರಿಪಡಿಸುವ ಅಥವಾ ಬೇರೆ ಟಿ.ಸಿ.ಗಳನ್ನು ಅಳವಡಿಸುವ ಕ್ರಮವನ್ನು ಸರ್ಕಾರವು ಕೈಗೊಳ್ಳಲಿದೆಯೇ? ಹಾಗಿದ್ದಲ್ಲಿ, ಯಾವಾಗ ಕ್ರಮ ಕೈಗೊಳ್ಳಲಾಗುವುದು? (ಟಿ.ಸಿ.ಗಳ ಹೆಸರಿನೊಂದಿಗೆ ಗ್ರಾಮವಾರು ಮಾಹಿತಿ ನೀಡುವುದು) | ಉ) | ಬೆಳಗಾವಿ ತಾಲೂಕಿನ ವ್ಯಾಪ್ತಿಯಲ್ಲಿರುವ ಗ್ರಾಮಗಳಲ್ಲಿ 1655 ಸಂಖ್ಯೆಯ ವಿವಿಧ ಸಾಮರ್ಥ್ಯದ ವಿದ್ಯುತ್ ಪರಿವರ್ತಕಗಳಿದ್ದು, ಅವುಗಳಲ್ಲಿ 91 ಸಂಖ್ಯೆಯ ವಿದ್ಯುತ್ ಪರಿವರ್ತಕಗಳು ಅಧಿಕ ಭಾರ ಹೊಂದಿರುವುದು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯ ಗಮನಕ್ಕೆ ಬಂದಿರುತ್ತದೆ. ಅವುಗಳ ಪೈಕಿ 48 ಸಂಖ್ಯೆಯ ಹೆಚ್ಚುವರಿ ವಿದ್ಯುತ್ ಪರಿವರ್ತಕಗಳನ್ನು ಈಗಾಗಲೇ ಅಳವಡಿಸಲಾಗಿದ್ದು, 16 ಸಂಖ್ಯೆಯ ವಿದ್ಯುತ್ ಪರಿವರ್ತಕಗಳನ್ನು ಬದಲಾಯಿಸಿ ಹೆಚ್ಚಿನ ಸಾಮರ್ಥ್ಯದ ವಿದ್ಯುತ್ ಪರಿವರ್ತಕಗಳನ್ನು ಅಳವಡಿಸಲಾಗಿದೆ. ಇನ್ನುಳಿದ 27 ಸಂಖ್ಯೆಯ ಹೆಚ್ಚುವರಿ ಪರಿವರ್ತಕಗಳನ್ನು ಅಳವಡಿಸಲು ಸೂಕ್ತ ಕ್ರಮಗಳನ್ನು ಪ್ರಸಕ್ತ 2020-21 ನೇ ಸಾಲಿನಲ್ಲಿ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯು ಕೈಗೊಳ್ಳಲಿದ್ದು, ವಿವರಗಳನ್ನು ಅನುಬಂಧ-3 ರಲ್ಲಿ ಒದಗಿಸಲಾಗಿದೆ. |
| ಊ) | ಈ ಮತಕ್ಷೇತ್ರದ ವ್ಯಾಪ್ತಿಗೆ ಪ್ರಸ್ತುತವಾಗಿರುವ ಕೊರತೆಗನುಗುಣವಾಗಿ ಇನ್ನೂ ಎಷ್ಟು ಟಿ.ಸಿ. ಗಳು ಯಾವ ಯಾವ ಗ್ರಾಮಗಳಲ್ಲಿ ಅವಶ್ಯಕತೆಯಿದೆ. ಅವುಗಳ ಜೋಡಣೆಯನ್ನು ಯಾವಾಗ ಮಾಡಲಾಗುವುದು (ವಾರ್ಡು ಹಾಗೂ ಗ್ರಾಮವಾರು ಮಾಹಿತಿ ನೀಡುವುದು) | ಊ) | ಬೆಳಗಾವಿ ದಕ್ಷಿಣ ವಿಧಾನಸಭಾ ಕ್ಷೇತ್ರದ ಕೆಳಕಂಡ ಗ್ರಾಮಗಳಲ್ಲಿ ಒಟ್ಟು 11 ಸಂಖ್ಯೆಯ ಹೆಚ್ಚುವರಿ ವಿದ್ಯುತ್ ಪರಿವರ್ತಕಗಳ ಅವಶ್ಯಕತೆ ಕಂಡುಬಂದಿದ್ದು, ವಿವರಗಳು ಕೆಳಕಂಡಂತಿವೆ. ಸದರಿ ಕಾಮಗಾರಿಗಳನ್ನು ಪ್ರಸಕ್ತ 2020-21 ನೇ ಸಾಲಿನಲ್ಲಿ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯು ಕೈಗೊಳ್ಳಲಿದೆ. |

| ಕ್ರಮ ಸಂಖ್ಯೆ | ಗ್ರಾಮ | ಅವಶ್ಯವಿರುವ ಹೆಚ್ಚುವರಿ ಪರಿವರ್ತಕಗಳ ಸಂಖ್ಯೆ |
|---|---|---|
| 1 | ಮಚ್ಚೆ | 02 |
| 2 | ಯಳ್ಳೂರ | 01 |
| 3 | ಹುಂಚ್ಯಾನಟ್ಟಿ | 01 |
| 4 | ಪೀರನವಾಡಿ | 02 |
| 5 | ದೇಸೂರ | 02 |
| 6 | ಧಾಮಣೆ | 02 |
| 7 | ಖಾದರವಾಡಿ | 01 |
| | ಒಟ್ಟು | 11 |

**ಸಂಖ್ಯೆ:** ಎನರ್ಜಿ 134 ಪಿಪಿಎಂ 2020

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಅಭಯ ಪಾಟೀಲ್ ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 3293ಕ್ಕೆ ಅನುಬಂಧ-1

ಬೆಳಗಾವಿ ತಾಲ್ಲೂಕಿನ ವ್ಯಾಪ್ತಿಯಲ್ಲಿ ನಿರಂತರ ಜ್ಯೋತಿ ಯೋಜನೆಯಡಿ ವಿದ್ಯುತ್ ಸರಬರಾಜು ಮಾಡಲಾಗುತ್ತಿರುವ ಗ್ರಾಮಗಳ ವಿವರಗಳು

| ಕ್ರ. ಸಂ. | ವಿಧಾನಸಭಾ ಮತಕ್ಷೇತ್ರದ ಹೆಸರು | ಗ್ರಾಮದ ಹೆಸರು |
|---|---|---|
| 1 | ಬೆಳಗಾವಿ ಗ್ರಾಮೀಣ | ಸಂತಿಬಸ್ತವಾಡ |
| 2 | | ಹಿಂಡಲಗಾ |
| 3 | | ವಿಜಯ ನಗರ |
| 4 | | ಗಣೇಶಪೂರ |
| 5 | | ಕಂಗ್ರಾಳ ಕೆ.ಎಚ್ |
| 6 | | ಅಲತಗಾ |
| 7 | | ಅಂಬೇವಾಡಿ |
| 8 | | ಮನ್ನೂರ |
| 9 | | ಗೋಜಗಾ |
| 10 | | ಜಜಗರ್ಣಿ |
| 11 | | ಬೋಕಮೂರ |
| 12 | | ಕಪಲೇವಾಡಿ |
| 13 | | ಬೆಳವಟ್ಟಿ |
| 14 | | ಬಾಕನೂರ |
| 15 | | ಬೆಳಗುಂದಿ |
| 16 | | ಸೋನೋಲಿ |
| 17 | | ಎಳೆಬೈಲ |
| 18 | | ರಾಕಸಕೊಪ್ಪ |
| 19 | | ಕುದ್ರೇಮನಿ |
| 20 | | ಕಲ್ಲೇಹೋಳ |
| 21 | | ಉಚಗಾಂವ |
| 22 | | ಬಸುರ್ತೆ |
| 23 | | ಬೆಕ್ಕಿನಕೇರಿ |
| 24 | | ಸುಳಗಾ |
| 25 | | ತುರಮುರಿ |
| 26 | | ಕೋಣೆವಾಡಿ |
| 27 | | ಬಾಚಿ |
| 28 | | ಸಾವಗಾಂವ |
| 29 | | ಮಂಡೋಳ |
| 30 | | ಹಂಗರಗಾ |
| 31 | | ಬೆನಕನಹಳ್ಳಿ |
| 32 | | ಕೊಂಡುಸಕೊಪ್ಪ |
| 33 | | ಹಲಗಾ |
| 34 | | ಬಸ್ತವಾಡ |
| 35 | | ಶಗನಮಟ್ಟಿ |
| 36 | | ಮಾಸ್ತಮರಡಿ |
| 37 | | ಬಸರಿಕಟ್ಟಿ |
| 38 | | ಶಿಂಧೋಳ್ಳಿ |
| 39 | | ಮುತಗಾ |

